# ಕಥಾ ಮಂಜರಿ

THE

# KATHA MANJARI,

OR

## BUNCH OF STORIES.

---

EDITED BY JOHN GARRETT,
Director of Public Instruction in Mysore.

---

**SECOND EDITION**

---

BANGALORE:

PRINTED AT THE MYSORE GOVERNMENT PRESS.

1866.

# ADVERTISEMENT.

The Kathá Manjari was first printed at the expense of H. Stokes, Esq. M. C. S, formerly Superintendent of the Nugur Division of Mysore, but has now become very scarce.

The style of the work is remarkably good, and having recently been adopted as one of the Test books for Examination in the Canarese language, this edition is published with the sanction of the Commissioner of Mysore.

Great care has been taken to guard against typographical errors, and in revising the work the Editor has been indebted to Mr. M. D. Singaracharry for various corrections, and for the assistance afforded in reading the proof sheets. As a specimen of beautiful printing the volume is creditable to the Government Press from which it has issued.

J. G.

BANGALORE,
*July* 1864.

# CONTENTS.

# ಕಥಾಮಂಜರಿ.

# KATHA MANJARI.

---

## 1. THE SANYASI AND THE FISHERMEN.

### ೧. ಸನ್ಯಾಸಿಯೂ—ಬೆಸ್ತರೂ.

ಯಾವ ಪ್ರಾಣಿಯನ್ನೂ ಕೊಲ್ಲದ ಒಬ್ಬ ಸನ್ಯಾಸಿ ಇದ್ದನು. ಅವನು ಒಂದಾನೊಂದು ದಿನ ಒಂದು ಕೆರೇ ಕಟ್ಟೆಯ ಮೇಲೆ ಹೋಗುತ್ತಿರುವಾಗ, ಆ ಕೆರೆಯಲ್ಲಿ ಬೆಸ್ತರು ಮೀನು ಹಿಡಿಯುತ್ತಾ ಇದ್ದರು; ಅದನ್ನು ನೋಡಿ ಬಹಳ ಕನಿಕರದಿಂದ ಆ ಸನ್ಯಾಸಿಯು ಎಲೈ ಬೆಸ್ತರೇ, ನಿಮ್ಮ ಕೆಲಸವನ್ನು ನೋಡಿ ನನಗೆ ಬಹಳ ದುಃಖ ಉಂಟಾಗಿದೆ, ಅಯ್ಯೋ ಪಾಪವೇ! ನೀವು ಯಾವಾಗ್ಯೆ ಕಟ್ಟೆಯ ಮೇಲಕ್ಕೆ ಹತ್ತಿ ಬರುವಿರಿ? ಅನ್ನಲು, ಆ ಬೆಸ್ತರು ಅಯ್ಯಾ, ನಮ್ಮ ಬುಟ್ಟಿಗಳು ತುಂಬಿದರೆ ಕಟ್ಟೆಯ ಮೇಲಕ್ಕೆ ಹತ್ತುತ್ತೇವೆ ಅಂದರು. ಹೀಗೆ ಲೋಕದಲ್ಲಿ ಅವರವರಿಗೆ ಬೇಕಾದ ಕೆಲಸಗಳೇ ಅಗತ್ಯವಲ್ಲದೆ ಒಬ್ಬರ ಮಾತು ಒಬ್ಬರು ಕೇಳುವದಿಲ್ಲ.

---

## 2. THE TWO BOXERS.

### ೨. ಇಬ್ಬರು ಜಟ್ಟಿಗಳು.

ಒಂದು ಪಟ್ಣದಲ್ಲಿ ಇಬ್ಬರು ಜಟ್ಟಿಗಳಿದ್ದರು. ಅವರಲ್ಲಿ ಒಬ್ಬನ ಹೆಸರು ವೀರಾಜಟ್ಟಿ, ಮತ್ತೊಬ್ಬನ ಹೆಸರು ಸೂರಾಜಟ್ಟಿ,

ಅವರಿಬ್ಬರೂ ದಸರೀ ಹಬ್ಬದಲ್ಲಿ ಕಾಳಗಕ್ಕೆ ಜೋಡು ಕಟ್ಟಲ್ಪಟ್ಟರು. ಹಬ್ಬಕ್ಕೆ ಒಂದು ತಿಂಗಳು ಮುಂಚಿತವಾಗಿಯೇ ಅವರಿಬ್ಬರೂ ಅರಸನ ಅಪ್ಪಣೇ ಪ್ರಕಾರ ಅವ್ವಲ್ ರಾತೀಬು ಅಂದರೆ, ಗೋದೀ ರೊಟ್ಟಿ, ತುಪ್ಪ, ಸಕ್ಕರೆ, ಹಾಲು, ಮಾಂಸ ಮುಂತಾದ್ದನ್ನು ಪಡಕೊಂಡು ಆ ತೀನಿಯಿಂದಲೂ, ಬೆಳಿಗ್ಯೆ ಸಾಯಂಕಾಲ ಸಹ ದಿನಂ ಪ್ರತಿಯಲ್ಲೂ ಮಾಡುವ ಗರಡಿ ಸಾಧಕದಿಂದಲೂ ಮಹಾ ಬಲವಂತರಾಗಿ, ಹಬ್ಬದ ಒಂಭತ್ತು ದಿವಸದ ಒಳಗೆ ಒಂದು ದಿವಸ ಇಬ್ಬರಿಗೂ ದೊಡ್ಡ ಕಾಳಗವು ಸಂಭವಿಸಿತು. ಆ ಮಲ್ಲ ಯುದ್ಧದಲ್ಲಿ ಅವರು ವಜ್ರ ಮುಷ್ಟಿಗಳನ್ನು ಹಿಡಿದು ಎದರು ಬದರಾಗಿ ನಿಂತು ಪಾವಲಾ ತುಳಿಯುತ್ತಾ, ಹತ್ರ ಹತ್ರಕ್ಕೆ ಶೇರಿ ಎಡ ಕೈಗಳ ಚಾಚಿ ಬಲ ಕೈಗಳನ್ನು ಮೇಲಕ್ಕೆ ಎತ್ತುತ್ತಾ, ವಜ್ರ ಮುಷ್ಟಿಗಳ ಮೊನೆಯಿಂದ ಪಿಳ್ಳು ಜುಟ್ಟುಗಳು ಕುಂದಾಡುವ ಬೋಳು ತಲೆಗಳ ಮೇಲೆ ಹೊಡದ ಘಾಯದಿಂದ ಸೋರುವ ರಕ್ತವು ಮೈ ಯೆಲ್ಲಾ ತೊಯಿಸುತ್ತಾ ಇರುವಾಗ, ಸೂರಾಜಟ್ಟಿಯು ತನ್ನ ಬಲವುಳ್ಳ ಭುಜದಿಂದ ವೀರಾಜಟ್ಟಿಯ ಭುಜಗಳನ್ನು ಬಿಮ್ಮನೆ ಬಿಗಿ ಹಿಡಿದು, ತನ್ನ ಬಲಗಾಲಿನಿಂದ ಅವನ ಬಲಗಾಲನ್ನು ಕತ್ತರಿ ಪಟ್ಟು ಹಿಡಿದು ಕೆಡವಿದನು. ಆಗ ವೀರಾಜಟ್ಟಿಯು ಸೋತು ನೆಲಕ್ಕೆ ಬಿದ್ದದ್ದನ್ನು ಸುತ್ತೂ ಇರುವ ಜನಗಳು ಕಂಡು ಘುಲ್ಲೆಂದು ನಕ್ಕರು. ಹೀಗೆ ತನ್ನ ಎದುರಾಳಿಯಿಂದ ಮಾನ ಭಂಗವನ್ನು ಹೊಂದಿ ಬಿಡಲ್ಪಟ್ಟ ವೀರಾಜಟ್ಟಿಯು ಎದ್ದು ನಿಂತು ಮೈ ಬರಸಿಕೊಳ್ಳುತ್ತಾ, ಆ ಜನಗಳನ್ನು ನೋಡಿ, ನಾನು ಬಿದ್ದು ಎದ್ದಾಗ್ಯೂ ನನ್ನ ಮೀಸೆ ಮಣ್ಣಾಗಲಿಲ್ಲವೆಂದು ಮೀಸೆಯನ್ನು ಹೊಸೆದನು. ಅದ

ನೋಡಿ ಜನರು ಮತ್ತೂ ಹೆಚ್ಚಾಗಿ ನಕ್ಕರು. ಹೀಗೆ ಭಂಡರು ಅವಮಾನಕ್ಕೆ ಹಿಂಜರಿಯರು.

---

## 3. THE MAN WHO LIVED BY HIS WITS.

### ೩. ಉಂಡಾಡಿಗನು.

ಒಬ್ಬ ಜಟ್ಟಿಯು, ದೊಡ್ಡ ಪಟ್ಟಣವನ್ನಾಳುವ ಒಬ್ಬ ಅರಸನ ಬಳಿಗೆ ಹೋಗಿ, ಅಯ್ಯಾ ಅರಸೇ, ನಾನು ಬಹಳ ದೂರದಿಂದ ಬಂದು ಇದ್ದೇನೆ, ನಾನು ಜಟ್ಟಿ ಕುಲದವನು, ನನ್ನ ಹೆಸರು ಉಂಡಾಡಿ ಜಟ್ಟಿ, ನನಗೆ ತಕ್ಕ ಭೋಜನವನ್ನು ಕೊಟ್ಟು ಆರು ತಿಂಗಳು ಮಾತ್ರ ಕಾಪಾಡಿದರೆ ದೊಡ್ಡ ಬೆಟ್ಟವನ್ನಾದರೂ ಹೊರ ಬಲ್ಲೆನು, ಅಂಥಾ ನನ್ನ ಬಲವನ್ನು ಪರೀಕ್ಷಿಸಿ ತಮ್ಮ ಚಿತ್ತಕ್ಕೆ ಸಂತೋಷ ಬಂದ ಹಾಗೆ ನನಗೆ ಸಂಬಳವನ್ನು ನಿಗದಿ ಮಾಡಿ ಸಮುಖದಲ್ಲಿ ಇಟ್ಟುಕೋ ಬೇಕೆಂತ ಹೇಳಿಕೊಂಡನು. ಆ ಮನುಷ್ಯನ ಮಾತಿನ ಅರ್ಥ ತಿಳಿಯದೆ, ಭೋಳಾ ಮನಸ್ಸುಳ್ಳ ಧೊರೆಯು ಅವನಿಗೆ ಭೋಜನಕ್ಕೆ ಬೇಕಾದ ಸಾಮಗ್ರಿಯನ್ನು ಖಾಸಾ ಮೋತೀಖಾನೆ ಎಂಬ ಸ್ವಂತ ಉಗ್ರಾಣದಿಂದ ಕೊಡುವ ಹಾಗೆ ನೇಮಿಸಿದನು. ಧಣಿಯು ಅಪ್ಪಣೆ ಪ್ರಕಾರ ಉಗ್ರಾಣದಿಂದ ಸಣ್ಣಕ್ಕಿ, ಗೋದೀ ಸಜ್ಜಿಗೆ, ಸಕ್ಕರೆ, ತುಪ್ಪ, ಹಾಲು, ಮಾಂಸ, ಮುಂತಾದ ಜಿನಸುಗಳನ್ನು ಪಡಕೊಂಡು ತನಗೆ ಬೇಕಾದ ಪದಾರ್ಥಗಳು ಮಾಡಿ ಚೆನ್ನಾಗಿ ತಿಂದು ಕೊಬ್ಬಿ ಬಲ್ತನು. ಅವನ ಒಂದೊಂದು ರೆಟ್ಟೆ ಒಂದೊಂದು ಮನುಷ್ಯನ ಗಾತ್ರವಾಯಿತು; ಈ ಪ್ರಕಾರ ಆರು ತಿಂಗಳು ಆದ ಕೂಡ್ಲೇ ಉಗ್ರಾಣ

ದ ಲೆಖ್ಖದವರು ಬಂದು, ಉಂಡಾಡಿ ಜಟ್ಟಿಗೆ ಆಪ್ಪಣೇ ಪ್ರಕಾರ ಆರು ತಿಂಗಳ ಭತ್ಯ ಸಂತು, ಇನ್ನು ಮೇಲೆ ಏನು ಅಪ್ಪಣೆ ಆ ಗುತ್ತದೋ ಆ ಮೇರೆಗೆ ನಡೆಯಲುಳ್ಳವರೆಂದು ತಿಳಿಸಿದರು. ಆ ವರದಿಯನ್ನು ಕೇಳಿ, ತಕ್ಷಣದಲ್ಲೇ ಕಪಟವರಿಯದ ಭೋ ಳಾ ಅರಸನು ಆ ಜಟ್ಟಿ ಎಂದು ಹೆಸರಿಟ್ಟುಕೊಂಡಿದ್ದ ಮನು ಷ್ಯನನ್ನು ಕರಸಿ, ನಿನ್ನ ಪೂರ್ವೋತ್ತರ ಏನು ಎನ್ನಲು, ಅವ ನು ನಾನು ಹೇಳಿರುವದು ನಿಜವೇ ಎಂದು ಧೈರ್ಯದಿಂದ ಉ ತ್ತರಾ ಕೊಟ್ಟನು. ಅದರ ಪರಿಕ್ಷೆಗೋಸ್ಕರ ಅರಸು ಪರಿವಾರ ಸಮೇತ ಊರಿಗೆ ಸಮಿಾಪವಾದ ಒಂದು ಬೆಟ್ಟದ ಹತ್ರಕ್ಕೆ ಬಂದು ನಿಂತು, ಎಲಾ ಉಂಡಾಡಿ ಜಟ್ಟೀ, ಎಲ್ಲಿ, ಬೆಟ್ಟವನ್ನು ಹೊತ್ತುಕೋ, ನಿನ್ನ ಸಾಮರ್ಥ್ಯವ ನೋಡೋಣ, ಎಂದು ಅಜ್ಞಾಪಿಸಿದನು. ಆ ಉಂಡಾಡಿಗನು ಓ ರಾಜಾಧಿ ರಾಜನೇ, ಈ ಬಂದಿರುವ ಜನಗಳೆಲ್ಲಾ ಒಂದೇ ಮನಸ್ಸಿನಿಂದ ಒಂದೇ ಪಟ್ಟಿಗೆ ಈ ಬೆಟ್ಟವನ್ನು ಬೇರು ಮುಟ್ಟ ಕಿತ್ತು ಪೆಳ್ಳಗಿಸಿ ಎತ್ತಿ ನನ್ನ ತಲೆಯ ಮೇಲೆ ಇಟ್ಟರೆ, ನಾನು ಹೊರುವದಕ್ಕೆ ಸಿದ್ಧವಾಗಿದ್ದೇನೆ, ಎಂದು ಹೇಳಲು, ಅರಸನು ಎಲಾ ಎಲಾ! ಹೊ ಟ್ಟೆ ಬಾಕನೇ, ನಿನ್ನ ಹೆಸರು ಉಂಡಾಡಿಗನು ಸರಿ! ಎಂತ ನ ಕ್ಕು ಅವನ್ನ ಶಿಕ್ಷಿಸದೆ ಬಿಟ್ಟು ಬಿಟ್ಟನು. ಹೊಟ್ಟೆಗೋಸ್ಕರ ಹೇ ಳಿದ ಚಕ್ಕಂದದ ಮಾತು ಅವನ ಪ್ರಾಣ ಸಂರಕ್ಷಣೆ ಮಾಡಿತು. ಹೀಗೆಯೇ ಹೊಟ್ಟೆ ಬಾಕರು ಸುಳ್ಳು ಮಾತುಗಳಿಂದಲೇ ಹೊಟ್ಟೆ ಹೊರಕೊಳ್ಳುವರು.

## 4. THE SPENDTHRIFT AND THE MISER.

### ೪. ವೆಚ್ಚಗಾರನೂ—ಲೋಭಿಯೂ.

ಒಂದು ಊರಿನಲ್ಲಿ ನೂರಾರು ರೂಪಾಯಿ ಸಂಬಳಗಾರನಾದ ಒಬ್ಬ ಮನುಷ್ಯನುಂಟು. ಅವನು ಬಹಳ ವೆಚ್ಚಗಾರನಾದ್ದರಿಂದ ತನಗೆ ಬರುವ ಸಂಬಳ ತನ್ನ ವೆಚ್ಚಕ್ಕೆ ಸಾಲದೆ, ಸಾಲ ಮಾಡುವದಕ್ಕಾಗಿ ಮಹಾ ಜಿಪುಣನಾದ ಒಬ್ಬ ಹಣಗಾರನ ಬಳಿಗೆ ಹೋಗಿ ಬಹಳ ಮರ್ಯಾದೆಯಿಂದ ಕಂಡು ಮಾತನಾಡಿ, ಅಯ್ಯಾ, ನನಗೆ ಬಹಳ ಸಮಯವಾಗಿದೆ, ಸಾವಿರ ರೂಪಾಯಿ ಸಾಲವಾಗಿ ಕೊಡಿಸಿ ಕೊಟ್ಟರೆ, ನೂರಕ್ಕೆ ಒಂದು ರೂಪಾಯಿ ಮೇರೆಗೆ ಬಡ್ಡಿ ಸಹಿತ ಕೆಲವು ತಿಂಗಳಲ್ಲಿ ನಿಮ್ಮ ಅಸಲನ್ನು ನಿಮಗೆ ಮುಟ್ಟಿಸುತ್ತೇನೆ, ಈ ಐವಜಿಗಾಗಿ ಛಾಪಾ ಕಾಗದದಲ್ಲಿ ಪತ್ರ ಬರದು ಕೊಡುತ್ತೇನೆ, ಒಂದು ತಿಂಗಳ ಬಡ್ಡಿ ಈಗಲೇ ಕೊಡುತ್ತೇನೆ, ಎಂದು ತನ್ನ ಜೇಬಿನಿಂದ ಹದಿನೈದು ರೂಪಾಯಿನ ಒಂದು ಮೊಹರಾವನ್ನು ತೆಗದು ಆ ಹಣಗಾರನ ಕೈಗೆ ಕೊಟ್ಟನು. ಅವನು ಆ ಮೊಹರಾವನ್ನು ತೆಕ್ಕೊಂಡು ಬೆರಳುಗಳಿಂದ ತಿಸುಕುತ್ತಾ ತಿಸುಕುತ್ತಾ ತಿರಿಗಿಸಿ ತಿರಿಗಿಸಿ ನೋಡಲು, ಇವನು ಅದನ್ನು ಕಂಡು ಏನೈಯ್ಯಾ ಅಪ್ರಕಾರ ನೋಟಾ ನೋಡುತ್ತೀರಿ, ಭಾರಿ ಮುದ್ರೆ ಅಲ್ಲ, ಒಳ್ಳೇ ಮೊಹರಾ ಚೀಲದಲ್ಲಿ ಹಾಕರಿ ಎಂದು ಹೇಳಿದ ಮಾತನ್ನು ಕೇಳಿ, ಆ ಹಣಗಾರನು ನಕ್ಕು, ಅಯ್ಯಾ ಗೃಹಸ್ಥನೇ, ಇದು ಸಲ್ಲದ ಮೊಹರಾ ಎಂದು ನೋಡಲಿಲ್ಲ, ಸಾವಿರ ರೂಪಾಯನ್ನು ನುಂಗುವ ದೊಡ್ಡ ಬಾಯಿ ಇದಕ್ಕೆ ಎಲ್ಲಿ ಇದೆಯೋ ಎಂದು ಹುಡು

ಕುತ್ತೇನೆ ಅನ್ನಲು, ವೆಚ್ಚಗಾರನ ಮುಖವು ಚಿಕ್ಕದಾಯಿತು. ಆಗ ಅವನನ್ನು ಹಣಗಾರನು ನೋಡಿ, ನೀನು ಬಹಳ ದುಂದುಗಾರನಾಗಿ ತೋರುತ್ತೀ, ಒಂದು ತಿಂಗಳಿಗೆ ಸಾವಿರ ರೂಪಾಯಿಗೆ ಬಡ್ಡಿ ನೂರಕ್ಕೆ ಒಂದು ಮೇರೆಗೆ ಹತ್ತು ರೂಪಾಯಿ ಆಗುತ್ತೆ, ಅಂಥಾದ್ದಕ್ಕೆ ಇದೇ ತಿಂಗಳ ಬಡ್ಡಿ ಎಂಬದಾಗಿ ಹದಿನೈದು ರೂಪಾಯಿ ಮೊಹರಿಯನ್ನು ಕೊಟ್ಟೆ ? ಇಂಥಾ ತೆಂಪುಗಾರನಾದ ನೀನು ನಮ್ಮ ಸಾಲವನ್ನು ಹ್ಯಾಗೆ ತೀರಿಸುವಿ ಎಂದು ಕೇಳಲು, ದುಂದುಗಾರನು ತನ್ನ ಸಂಬಳದಲ್ಲಿ ಐವತ್ತು ರೂಪಾಯಿ ತಿಂಗಳು ಗಟ್ಲೆ ಕೂಡಿಸಿ ಸಾಲಾ ಹರಿಸ ಬೇಕೆಂದು ಆಲೋಚನೆ ಮಾಡಿ ಇದ್ದೇನೆ, ಎಂತ ಹೇಳಿದನು. ಅದ ಕೇಳಿ ಹಣಗಾರನು ಅಯ್ಯಾ ಗ್ರಹಸ್ಥನೇ, ಮುಂಚೆಯೇ ಯಾಕೆ ಹೀಗೆ ಮಾಡಲಿಲ್ಲ ? ನಿನಗೆ ನಾನು ಖಂಡಿತವಾಗಿ ಸಾಲಾ ಕೊಡುವದಿಲ್ಲ, ನಿನ್ನ ಮೊಹರಾವನ್ನು ಜೇಬಿನಲ್ಲಿ ಹಾಕು, ಎಂದು ಹಿಂದಕ್ಕೆ ಬಿಸಾಡಲು, ಆ ವೆಚ್ಚಗಾರನು ತಕ್ಷಣಕ್ಕೆ ಅವಮಾನ ಹೊಂದಿದಾಗ್ಯೂ ಚಿಂತೆಯಿಲ್ಲ, ಈ ಹಣಗಾರನ ಮಾತು "ಹಿಂದಕ್ಕೆ ತಪ್ಪು ಮುಂದಕ್ಕೆ ಬುದ್ಧಿಯಾಗಿ" ತೋರುತ್ತದೆ ಎಂದು ಮನಸ್ಸಿಗೆ ತಂದು, ಅಲ್ಲಿಂದ ಮನೆಗೆ ಬಂದು ತನಗೆ ಬರುವ ಸಂಬಳದಲ್ಲಿ ಗೃಹಕೃತ್ಯ ಮುಂತಾದ್ದಕ್ಕೆ ಅರ್ಧ ವೆಚ್ಚ ಮಾಡಿ, ಮಿಕ್ಕ ಅರವಾಶಿ ರೂಪಾಯನ್ನು ಕೂಡಿಸುತ್ತಾ ಕೂಡಿಸುತ್ತಾ ಕೆಲವು ಕಾಲಕ್ಕೆ ತಾನೂ ಹಣಗಾರನಾದನು. ಹೀಗೆಂಯೇ ಹಣಾ ಸಂಪಾದಿಸಿ ಇಡ ಮನಸ್ಸುಳ್ಳವನು ಮಿತವಾಗಿ ಖರ್ಚು ವೆಚ್ಚಗಳು ಮಾಡುತ್ತಾನೆ.

---

## 5. THE TEACHER AND HIS DISCIPLE.

### ೫. ಗುರು ಶಿಷ್ಯರು.

ಗಂಗಾ ತೀರದಿಂದ ಬಹು ಯೋಗ್ಯನಾದ ಒಬ್ಬ ಜ್ಞಾನೋಪದೇಶಿಯು ದೇಶ ಸಂಚಾರವನ್ನು ಮಾಡುತ್ತಾ ಮಾಡುತ್ತಾ ಕಾವೇರೀ ತೀರಕ್ಕೆ ಬಂದು, ಅಲ್ಲಿ ಒಂದು ಅಗ್ರಹಾರದಲ್ಲಿ ಕೆಲವು ದಿವಸ ನಿಂತನು. ಆ ಊರಿನ ಜನಗಳಲ್ಲಿ ಒಬ್ಬ ಕುಚೋದ್ಯಗಾರನು ಈ ಉಪದೇಶಿಯ ಬಳಿಗೆ ಬಂದು ಸಾಷ್ಟಾಂಗವೆರಗಿ, ನೀವು ಗುರುಗಳು, ನಾನು ಶಿಷ್ಯನು, ನನಗೆ ಜ್ಞಾನೋಪದೇಶವನ್ನು ಮಾಡಿ ಕೀರ್ತಿ ಸಂಪಾದಿಸ ಬೇಕೆಂದು ಅತಿ ವಿನಯದಿಂದ ಬೇಡಿ ಕೊಳ್ಳಲು, ಆ ಗುರುವು ಸಮ್ಮತಿಸಿ ಶಿಷ್ಯನ ಮನೋಭಾವವನ್ನು ಅರಿಯದೆ ತನಗೆ ತೋಚಿದ ಮಾತುಗಳೆಲ್ಲಾ ಹೇಳಿಮುಗಿಸಿದನು. ಆಗ ಶಿಷ್ಯನು ಗುರುವು ಹೇಳಿದ ಮಾತಿಗೆ ಬಾಯಲ್ಲಿ ಮಾತ್ರ ಊ, ಊ, ಎಂದು ಊಗುಟ್ಟುತ್ತಾ, ಅಲ್ಲಿ ಬಂದು ಬಿಲದಲ್ಲಿ ಪ್ರವೇಶಿಸುವ ಇಲಿಯನ್ನು ನೋಡುತ್ತಾ ಇದ್ದನು, ಗುರುವು ಏನೈಯ್ಯಾ ಶಿಷ್ಯನೇ, ನಾನು ಹೇಳಿದ ಮಾತೆಲ್ಲಾ ಮನಸ್ಸಿಗೆ ಹಿಡೀತೇ? ಎಂದು ಕೇಳಲು, ಬೊಕ್ಕೆಯಲ್ಲಿ ಇಲಿಯು ಮೈಯೆಲ್ಲಾ ಹಿಡೀತು, ಅದರ ಬಾಲ ಮಾತ್ರ ಇನ್ನೂ ಈಚೆಯೇ ಇದೆ ಅಂದನು. ಅದಕ್ಕೆ ಆ ಗುರುವು „ಕೋಣನ ಮುಂದೆ ಕಿನ್ನರಿ ಬಾರಿಸಿದ ಹಾಗೆ ಆಯಿತು' ಅಂದನು. ಈ ಸಾಮತಿ ನಮ್ಮಿಬ್ಬರಲ್ಲಿ ಯಾರಿಗೆ ಒಪ್ಪುತ್ತದೋ ಅದು ತಮಗೇ ವೇದ್ಯವೆಂದು ಶಿಷ್ಯನು ನುಡಿದನು.

## 6. THE VIZIER APPAJI.

## ೬. ಮಂತ್ರಿ ಅಪ್ಪಾಜಿ.

ಒಂದಾನೊಂದು ದಿವಸ ತಿರುಮಲರಾಯನು ಒಂದು ಕೆರೇ ಕಟ್ಟೆಯ ಮೇಲೆ ಸಂಚಾರ ಮಾಡುತ್ತಾ ಕೆರೆಯ ನೀರನ್ನು ನೋಡಿ ಅದಕ್ಕಾಗಿ ತನ್ನ ಮನಸ್ಸಿಗೆ ತೋರಿದ ಯುಕ್ತಿಗೆ ಸರಿಯಾಗಿ ಯಾರು ಉತ್ತರಾ ಕೊಡುತ್ತಾರೋ ನೋಡೋಣವೆಂದು, ತನ್ನ ಸಂಗಡ ಬರುತ್ತಾ ಇರುವ ಪರಿವಾರ ಜನವನ್ನು ಕುರಿತು, ಈ ಕೆರೆಯ ನೀರು ಹ್ಯಾಗಿದೆ? ಎಂದು ಪ್ರಶ್ನೆ ಮಾಡಿದನು. ಆಗ ಕೆಲವರು ಹಾಲಿನ ಹಾಗೆ ಶೀಯಾಗಿದೆ ಎಂದೂ, ಕೆಲವರು ಮುತ್ತಿನ ಮಣಿಯ ಹಾಗೆ ನಿರ್ಮಲವಾಗಿದೆ ಎಂದೂ, ಕೆಲವರು ಶಾಂತವುಳ್ಳ ಒಳ್ಳೇ ಮನುಷ್ಯನ ಮನಸ್ಸಿನ ಹಾಗೆ ತಿಳಿಯಾಗಿ ಇದೆ ಎಂದೂ, ಕೆಲವರು ನೀಲ ಮಣಿಯ ಹಾಗೆ ಕಾಂತಿಯುಂಟಾಗಿದೆ ಎಂದೂ, ಕೆಲವರು ಬಹಳ ಆಳವಾಗಿದ್ದಾಗ್ಯೂ, ತಳದಲ್ಲಿ ಇರುವ ಸಣ್ಣ ಸಣ್ಣ ಕಲ್ಲುಗಳು ಉಸುಬು ಸಹ ಮೇಲಕ್ಕೆ ಕಾಣಿಸುತ್ತಾ ಕಲ್ಮಷ ರವಷ್ಟಾದರು ಇಲ್ಲದೆ ನೋಡುವದಕ್ಕೆ ಎಷ್ಟೋ ರಮ್ಯವಾಗಿದೆ ಎಂದೂ, ಅವರವರಿಗೆ ತೋರಿದ ಯುಕ್ತಿಗಳನ್ನು ಹೇಳಿದರು. ಅದು ಯಾವದೂ ರಾಯನ ಮನೋಭಾವಕ್ಕೆ ಸರಿಯಾಗದೆ ಇದ್ದಕಾರಣ ಆತನು ಮುಗುಳು ನಗು ನಗುತ್ತಾ ಮಂತ್ರಿಯಾದ ಅಪ್ಪಾಜಿಯ ಮುಖವನ್ನು ನೋಡಿದನು. ಅಪ್ಪಾಜಿಯು ಮಹಾ ರಾಜನೇ, ಕೆರೇ ನೀರು ಕಟ್ಟೆಯ ಬಲದಿಂದ ಇದೆ ಅನ್ನಲು, ರಾಯನು ತನ್ನ ಮನಸ್ಸಿನ ಅಭಿಪ್ರಾಯ ಬಂತೆಂದು ಸಂತೋಷ ಪಟ್ಟನು. ಹೀಗೆಯೇ ಪರರ ಇಂಗಿತವನ್ನು ತಿಳಿದು ಹೇಳುವ ಬುದ್ಧಿಯು

ಸರ್ವ ಸಾಧಾರಣವಾಗಿ, ಎಲ್ಲರಿಗೂ ಉಂಟಾಗಲಾರದು. "ಶತೇಷು ಜಾಯತೇ ಶೂರಃ, ಸಹಸ್ರೇಷು ಚ ಪಂಡಿತಃ, ವಕ್ತಾ ದಶಸಹಸ್ರೇಷು, ದಾತಾ ಭವತಿ ವಾ ನವಾ." ಅಂದರೆ, ನೂರು ಜನರಲ್ಲಿ ಶೂರನಾದವನು ಒಬ್ಬನೇ ಹೊರ್ತು ಎಲ್ಲರಿಗೂ ಶೂರತ್ವ ಉಂಟಾಗದು, ಸಾವಿರ ಮಂದಿಯಲ್ಲಿ ಯುಕ್ತಾಯುಕ್ತವನ್ನು ತಿಳಿದು ಹೇಳುವ ಪಂಡಿತನು ಒಬ್ಬನೇ ಹೊರ್ತು ಎಲ್ಲರಿಗೂ ಪೂರ್ಣ ಪಾಂಡಿತ್ಯ ವಿರಲಾರದು, ಹತ್ತು ಸಾವಿರ ಮಂದಿಯಲ್ಲಿ ಕೇಳಿದ ಮಾತುಗಳಿಗೆಲ್ಲಾ ಸಮುತ್ತರವನ್ನು ಹೇಳುವ ವಾಚಾಳಕನು ಒಬ್ಬನೇ ಹೊರ್ತು ಎಲ್ಲರೂ ಅಲ್ಲ, ಇಲ್ಲವೆಂದು ಹೇಳದೆ ಯಾಚಕರಿಗೆ ಕೇಳಿದ್ದನ್ನೆಲ್ಲಾ ಕೊಡುವ ಕೊಡಗೈಯುಳ್ಳ ದಾತನು ಇದ್ದಾನೋ ಇಲ್ಲವೋ ನಿಶ್ಚೈಸಿ ಹೇಳ ಕೂಡದು, ಎಂಬಂತೆ ಅಭಿಜ್ಞನಾದ ಮಹಾ ಮಂತ್ರಿಯು ಅಪರೂಪವೆಂತ ಅರಿಯ ಬೇಕು.

---

## 7. THE UNEDUCATED BOYS.

### ೭. ಅಶಿಕ್ಷಿತ ಹುಡುಗರು.

ಒಬ್ಬ ಗುರುವು ಒಬ್ಬ ಶಿಷ್ಯನ ಮನೆಗೆ ಬಂದು ಗುರು ಮರ್ಯಾದೆಯನ್ನು ಶಿಷ್ಯನಿಂದ ಹೊಂದಿ ಸಂತೋಷ ಪಟ್ಟು ಶಿಷ್ಯನ ಸಂಸಾರದ ಯೋಗ ಕ್ಷೇಮವನ್ನು ವಿಚಾರಿಸಿ, ನಿನಗೆ ಗಂಡು ಮಕ್ಕಳು ನಾಲ್ಕು ಮಂದಿಯೋ? ಹೆಣ್ಣು ಮಕ್ಕಳಿಗೆ ಮದುವೆ ಆಗಿ ಇದೆಯೋ? ಮದುವೆಗೆ ಎದವಿ ಇದ್ದಾರೆಯೋ ? ಹ್ಯಾಗಾದರು ಹೆಣ್ಣು ಮಕ್ಕಳು ನೆರೆ ಮನೆಗೆ ಬಾಹ್ಯರಾಗುವರು, ಅವರ

ವರ್ತಮಾನ ಇಷ್ಟೇ ಸರಿ, ನಿನ್ನ ನಾಲ್ಕು ಮಂದಿ ಗಂಡು ಮಕ್ಕಳಲ್ಲಿ ಬುದ್ಧಿವಂತನ್ಯಾರು? ಅವರನ್ನೆಲ್ಲಾ ಕರಸು, ನೋಡೋಣ ಎಂದನು; ಆ ಶಿಷ್ಯನು ಸ್ವಾಮಿ, ಗುರುವೇ, ಅಗೋ ಪರಾಂಬರಿಸಿ, ಆ ಹುಲ್ಲಿನ ಬಣಿವೇ ಮೇಲೆ ಉರಿಯುವ ಕೊಳ್ಳಿಯನ್ನು ತಿರಿಗಿಸುತ್ತಾ ತಿರುಗಾಡುತ್ತಾನಲ್ಲಾ, ಇವನೇ ನನ್ನ ಮಕ್ಕಳೊಳಗೆ ಬುದ್ಧಿವಂತನು ಅನ್ನಲು; ಆ ಗುರುವು ಅಯ್ಯೋ! ಇವನೇ ಬುದ್ಧಿವಂತನಾದ ಮೇಲೆ ಕಡಮೆಯುವರು ಹ್ಯಾಗಿರುವರೋ ಎಂದು ದುಃಖದಿಂದ ನಿಟ್ಟುಸುರು ಬಿಟ್ಟನು. ಅದನ್ನು ನೋಡಿ ಶಿಷ್ಯನು ಏನು ಸ್ವಾಮಿ, ಬಹಳ ವ್ಯಸನ ಪಡುತ್ತೀರಿ, ನನ್ನ ಮಕ್ಕಳೊಳಗೆ ಇವನೇ ಬುದ್ಧಿವಂತನೆಂದು ಹೇಳಿದ್ದಕ್ಕೆ, ಕಡಮೆಯುವರು ಬುದ್ಧಿ ಹೀನರೆಂದು ಚಿತ್ತಕ್ಕೆ ತೋರಿತೋ? ಹಾಗಲ್ಲ, ಅಗೋ ನೋಡಿ, ಇನ್ನೊಬ್ಬನು ಮರದ ಕೊನೇ ಕೊಂಬಿನ ಮೇಲೆ ಕೊಡ್ಲಿ ಹಿಡುಕೊಂಡು ಬುಡವನ್ನು ಕಡಿಯುವದಕ್ಕೆ ಕೂತಿದ್ದಾನೆ, ಮತ್ತೊಬ್ಬ ಮಗನ್ನ ನೋಡಿದಿರಾ? ಅಗೋ ಚುಂಡಿಲಿಯನ್ನು ಹಿಡಿಯುವದಕ್ಕೆ ದೊಡ್ಡ ಕಲ್ಲು ಬಂಡೆಯ ಬುಡದಲ್ಲಿ ಗುದ್ದಲಿಯಿಂದ ಆನೆಯುದ್ದ ಹಳ್ಳವನ್ನು ಅಗದು ಆ ಪಾರೆಯನ್ನು ಹಳ್ಳದಲ್ಲಿ ತಳ್ಳುವದಕ್ಕೆ ಅದರ ಕೆಳಗೆ ಜೊಗರು ತೋಡುತ್ತಾನೆ, ಇಗೋ ಮತ್ತೊಬ್ಬನ್ನ ನೋಡಿ, ತುಂಬಿ ತುಳಕಿ ದೊಂಬರಗಡೆಯುದ್ದ ನೀರಿರುವ ಕೆರೆಯ ಹಿಂದಣಿಂದ ಸನಿಕೆಯಲ್ಲಿ ಮಣ್ಣು ಅಗಿಯುತ್ತಾ ಅಗಿಯುತ್ತಾ ಆಳುದ್ದ ಹಳ್ಳವಿಕ್ಕಿ ಕೆರೇ ನೀರು ವೋಳೆ ಇಟ್ಟುಕೊಂಡು ಉರುಬಾಗಿ ಹೊರಡುವದನ್ನು ನೋಡಿ, ಆ ಹಳ್ಳದಲ್ಲೇ ಪಟ್ಟಾಗಿ ನಿಂತುಕೊಂಡು, ಕೆರೆಯ ಮುಂಗಟ್ಟು ಕಲ್ಲುಗಳನ್ನು ಅಗದಗದು

ಕದಲಿಸಿ ಒಳಕ್ಕೆ ದಬ್ಬುತ್ತಾನೆ, ಹೀಗೆ ಒಬ್ಬನು ತುಂಬಿದ ಕೆರೆಗೆ ಮೋಳೆ ಇಕ್ಕಿ ತಮಾಷೆ ನೋಡುವನು, ಮತ್ತೊಬ್ಬನು ಚುಂಡಿಲಿಯನ್ನು ಹಿಡಿಯುವದಕ್ಕೆ ಬೆಟ್ಟದಂಥಾ ಗುಂಡನ್ನು ತೋಡುತ್ತಾನೆ, ಇನ್ನೊಬ್ಬನು ಕೊನೆಯಲ್ಲಿ ಕೂತು ಮರದ ಬುಡವನ್ನು ಕಡಿಯುತ್ತಾನೆ, ಮತ್ತೊಬ್ಬನು ಹುಲ್ಲಿನ ಬಣವೆಯ ಮೇಲೆ ಉರಿ ಗೊಳ್ಳಿಯನ್ನು ತಿರಿಗಿಸುತ್ತಾನೆ, ಈ ನಾಲ್ಕು ಮಂದಿಯಲ್ಲಿ ಚಿಕ್ಕವನೇ ಬುದ್ಧಿವಂತನಲ್ಲವೋ? ಎಂದು ಮಕ್ಕಳ ಗುಣಗಳನ್ನು ವಿವರಿಸಿದನು. ಅದನ್ನು ಕೇಳಿ ಗುರುವು ನಿನ್ನ ಸಂಸಾರಕ್ಕೆ ದೇವರೇ ಗತಿ ಎಂದು ಹೊರಟು ಹೋದನು.

---

## 8. THE MISER.

## ೮. ಲೋಭಿ.

ಪರಮ ಲೋಭಿಯಾದ ಒಬ್ಬ ಹಣಗಾರನು ತನ್ನನ್ನು ಹೊತ್ತು ಹೆತ್ತು ಸಾಕಿ ಸಲಹಿ, ನಡೆ ನುಡಿ ಮಾತು ಕಥೆ ವಿದ್ಯೆ ಬುದ್ಧಿ ಎಲ್ಲಾ ಕಲಿಸಿ, ಆಸ್ತಿಗೆಲ್ಲಾ ಯಜಮಾನನಾಗಿ ನೇಮಿಸಿ, ಮುದುಕನಾದ ತಂದೆಗೆ ಬಾಯಿಗೆ ಹಿತವಾದ ಭೋಜನವನ್ನು ಕೊಟ್ಟು ಪ್ರೀತಿಯಿಂದ ಆದರಣೆ ಮಾಡದೆ, ಒಡದ ಮಡಕೆಯ ಬೋಕಿಯಲ್ಲಿ ನಿತ್ಯವೂ ಗಂಜಿ ಹೊಯ್ಯುತ್ತಾ ಇದ್ದನು. ಇವನ ಮಗನು ಇವನಿಗಿಂತಲೂ ಎಲ್ಲಾ ವಿಷಯಗಳಲ್ಲೂ ಬುದ್ಧಿವಂತನಾಗಿ, ಇದು ಒಳ್ಳೇ ಕೆಲಸ, ಇದು ಅಲ್ಲದ ಕೆಲಸ, ಇದನ್ನು ಮಾಡ

ಬಹುದು, ಇದನ್ನು ಮಾಡ ಬಾರದು, ಎಂಬ ನ್ಯಾಯಾನ್ಯಾಯ ಗಳನ್ನೂ ಧರ್ಮಾಧರ್ಮಗಳನ್ನೂ ಪರಿಶೋಧಿಸಿ ತಿಳುಕೊಂಡು ಗುಣವಂತನಾಗಿ ಇದ್ದದ್ದರಿಂದ, ಆವನು ತನ್ನ ತಂದೆಯು ತನ್ನ ತಾತನಿಗೆ ಮಣ್ಣಿನ ಬೋಕಿಯಲ್ಲಿ ಆರಿ ಹಳಸಿದ ಗಂಜಿಯನ್ನು ಕುಡಿಯ ಹೊಯ್ಯುವ ಅವಿಶ್ವಾಸವನ್ನೂ ಅನ್ಯಾಯವನ್ನೂ ಅಧರ್ಮವನ್ನೂ ದ್ರೋಹವನ್ನೂ ಪಾಪವನ್ನೂ ಕೇಳಿ ನೋಡಿ, ತನ್ನಲ್ಲಿ ತಾನೇ ತಹ ತಹ ಪಡುತ್ತಾ, ನನ್ನ ತಂದೆಗೆ ಇಂಥಾ ದುರ್ಬುದ್ಧಿ ಹುಟ್ಟ ಬಹುದೋ? ಕೂಡದು, ಈ ಲೋಭತ್ವವನ್ನು ಹ್ಯಾಗೆ ಹೋಗಲಾಡಿಸಿ ಗುಣಪಡಿಸಲಿ, ಎಂದು ಬಹಳವಾಗಿ ಆಲೋಚನೆ ಮಾಡಿ, ಮುದಕನಾದ ತಾತನಿಗೆ ತಂದೆ ಗಂಜಿ ಹೊಯ್ಯುವ ಮಣ್ಣಿನ ಬಕ್ಕರೆಯನ್ನು ಯಾರೂ ಕಾಣದ ತಾವಿನಲ್ಲಿ ಹೂಳಿಟ್ಟು ಬಿಟ್ಟನು. ಆಗ ಆ ಲೋಭಿಯು ತಂದೆಗೆ ಗಂಜಿ ಹೊಯಿಸುವ ಬೋಕಿಯನ್ನು ಇಟ್ಟದ್ದ ಕಡೆ ಕಾಣದೆ, ಮುದಕನಾದ ತಂದೆಯನ್ನು ನೋಡಿ, ಗೂಬೆ ಗೂಬೆ, ಗಂಜೀ ಬಕ್ಕರೆ ಎಲ್ಲಿ? ಒಡದು ಬಿಟ್ಟಿಯೋ, ಬಿಸಾಟು ಬಿಟ್ಟಿಯೋ? ಹೇಳು, ಗಂಜಿ ಕುಡಿಯ ಬೇಡವೋ, ಈಗಲೇ ಸಾಯುತ್ತೀಯೋ? ಎಂದು ಗದ್ದಿಸಿ, ಬೈದು, ಮುದಕನನ್ನು ಹೊಡಿಯುವದಕ್ಕೆ ಉರುಬುರುಬಿಕೊಂಡು ಹೋದನು. ಅದನ್ನು ಕಂಡು, ನಡತೆವಂತನಾದ ಈ ಮಗನು ಅಪ್ಪಾ, ಮುದಕನಾದ ತಾತನನ್ನು ಯಾಕೆ ಹೊಡದು ಕೊಲ್ಲುವದಕ್ಕೆ ಹೋಗುತ್ತೀ? ಗಂಜೀ ಬಕ್ಕರೆಯನ್ನು ತಾತನು ಒಡದು ಬಿಸಾಡಲಿಲ್ಲ, ನಾನೇ ಭದ್ರವಾಗಿ ಹೂಳಿಟ್ಟಿದ್ದೇನೆ, ಯಾಕಂದರೆ, ನಾಳೆ ನೀನು ಮುದಕನಾದರೆ, ನಿನಗೆ ಆರಿ ಹಳಸಿದ ಗಂಜಿಯನ್ನು ಹೊಯ್ಯುವದಕ್ಕೆ ಮಣ್ಣಿನ

ಬಕ್ಕರೆ ನಾನು ಎಲ್ಲಿ ಸಂಪಾದಿಸಲಿ ? ಯಾರು ಕೊಟ್ಟಾರು ? ಅಂದನು. ಈ ಮಾತನ್ನು ಕೇಳಿದ ಮಾತ್ರದಲ್ಲೇ ಆ ಲೋಭಿ ಬಹಳ ನಾಚಿಕೆ ಪಟ್ಟು, ಛೀ! ಛೀ! ನನ್ನ ಹುಟ್ಟು ವ್ಯರ್ಥ ವಾಯಿತೆಂದು ಪಶ್ಚಾತ್ತಾಪ ಪಟ್ಟು, ಅಂದಿನಿಂದ ಹೆತ್ತ ತಂದೆಯನ್ನು ಬಹಳವಾಗಿ ಆದರಿಸಿ ಕಾಪಾಡುತ್ತಾ ಇದ್ದನು. ಹೀಗೆ ಚಿಕ್ಕವರಾದಾಗ್ಯೂ ವಿವೇಕ ಶಾಲಿಗಳು ಕಾರ್ಯಗಳನ್ನು ದಿಟ್ಟಪಡಿಸುವರು.

---

## 9. THE SONGSTER AND THE SHEPHERD.

### ೯. ಸಂಗೀತಗಾರನೂ ಕುರುಬನೂ.

ಒಬ್ಬ ಸಂಗೀತಗಾರನು ಒಂದು ದೊಡ್ಡ ಊರಿಗೆ ಬಂದು, ನೋಡುವದಕ್ಕೆ ಚನ್ನಾಗಿರುವ ಒಂದು ಮನೆಯ ಮುಂದಣ ವಿಸ್ತಾರವಾದ ಕೈಸಾಲೆಯಲ್ಲಿ ದಿಟ್ಟವಾಗಿ ಕೂತುಕೊಂಡು, ಜರೀಪೇಟ ರುಮಾಲೆ ಸುತ್ತಿಕೊಂಡು, ಮೋಲು ಬನಾತಿನ ಕಬಾಯಿ ತೊಟ್ಟುಕೊಂಡು, ಕುತ್ತಿನಿ ಪಾಯಿಜಾಮಾ ಹಾಕಿಕೊಂಡು ರೇಷಿಮಾನಿ ಕೈವಸ್ತ್ರ ಸಹ ಬಹಳ ಡಬಡ್ಡಾಳಿಕೆಯಿಂದ ಹಾಡುತ್ತಾ ಇರಲಾಗಿ, ಬೀದಿಯಲ್ಲಿ ಹೋಗುವ ಬರುವ ಜನಗಳೆಲ್ಲಾ ಕೇಳುವದಕ್ಕೆ ಕೂಡಿ ತುಂಬಿ ಸಾಲಾಗಿ ಸರಿಯಾಗಿ ಗುಂಪಾಗಿ ಸೊಂಪಾಗಿ ಕೂತುಕೊಂಡಿದ್ದರು. ಆಗ ಆ ಗಾಯಕನು ಪ್ರತಿ ಕೂಡಿದ ತಂಬೂರಿಯನ್ನು ಮಿಾಟುತ್ತಾ, ನಾಟವರಾಳ, ಆನಂದ ಭೈರವಿ, ಶಂಕರಾಭರಣ, ಮುಂತಾದ ರಾಗಗಳನ್ನು ಆಲಾಪನೆ ಮಾಡುತ್ತಾ, ವಿಳಂಬಕಾಲ, ಮಧ್ಯಮಕಾಲ, ದೃತಕಾಲ,

ಅಕ್ಷರಕಾಲ, ಸ್ವರಕಲ್ಪನೆ, ಪಲ್ಲವಜಾತಿ, ಘನ, ನಯ, ದೇಶಿಯ ಮುಂತಾದ ನಾನಾವಿಧ ಅಲಂಕಾರ, ಶೃಂಗಾರಾದಿರಸ ಭಾವಗಳ ನ್ನು ಕ್ರಮವಾಗಿ ತೋರಿಸುತ್ತಾ ಇದ್ದನು. ಪ್ರಯಾಸ ಪಟ್ಟು ಹಾಡುವಾಗ ಬಹಳವಾಗಿ ತಲೆ ಅಲ್ಲಾಡಿಸುವದೂ ಮುಂದಕ್ಕೆ ಹಿಂ ದಕ್ಕೆ ತೂಗಾಡುವದೂ ಸಂಗೀತಗಾರರಿಗೆ ಸಾಧಾರಣವಾದ ವಾ ಡಿಕೆಯಾಗಿ, ಅಂಗ ವಿಕಾರಗಳು ಇಲ್ಲದೆ ಹಾಡುವದು ಅಪರೂಪ ವಾಗಿರುವದರಿಂದ ಆ ಅಭಿನಯಗಳು ಬಹಳವಾಗಿ ನಡೆಯುತ್ತಾ ಇತ್ತು. ಹೀಗಿರುವಲ್ಲಿ ಆ ಹಾದಿಯಲ್ಲಿ ಹೋಗುವ ಒಬ್ಬ ಕು ರುಬನು ಅಲ್ಲಿ ನಿಂತು ಸ್ವಲ್ಪ ಹೊತ್ತು ನೋಡಿ, ಬಿಕ್ಕಿ ಬಿಕ್ಕಿ ಅ ತ್ತನು, ಯಾಕೆ ಅಳುತ್ತೀ? ಎಂದು ಜನರು ಕೇಳಿದ್ದಕ್ಕೆ, ನನ್ನ ಕುರಿಗಳ ಹಿಂಡಿಗೆ ಇಂಥಾ ಅದುರು ರೋಗ ಬಂದು ಎಲ್ಲಾ ಉದುರಿ ಹೋಯಿತು ಸ್ವಾಮಿ, ಈ ಹರೇದ ಹುಡುಗನಿಗೆ ಅದೇ ರೋ ಗ ಬಂದು ಸಾಯುತ್ತಾನೆ, ಗುಳವ ಕಾಸಿ ಬೇಗ ಬರೆ ಹಾಕಿದರೆ ಬದುಕುತ್ತಾನೆ ಅನ್ನಲು, ಜನರು ಅವನನ್ನು ಬೈದು ತರಿಮಿದರು. ಬೆಳತಿಂಗಳ ಚೆಲುವಿಕೆ ಹುಟ್ಟು ಕುರುಡನಿಗೂ ಕಿವುಡನಿಗೆ ವೀ ಣಾ ನಾದವೂ ಮೂಗನಿಗೆ ಕಥೆಯ ಸ್ವಾರಸ್ಯವೂ ಹ್ಯಾಂಗೆ ತಿಳಿ ಯದೋ ಹಾಂಗೆಯೇ ಸಂಗೀತದಲ್ಲಿ ರುಚಿ ಇಲ್ಲದವನಿಗೆ ಗಾನ ರಸ ಲವಪ್ಪಾದರೂ ತಿಳಿಯುವದು ಅಪರೂಪ.

---

## 10. THE THIEF AND THE GARDENER.

### ೧೦. ಕಳ್ಳನೂ ತೋಟಗಾರನೂ.

ಒಬ್ಬನ ತೋಟದಲ್ಲಿ ತೆಂಗಿನ ಕಾಯಿಗಳನ್ನು ಕದಿಯ ಬೇಕೆಂದು ಒಬ್ಬ ಕಳ್ಳನು ತೆಂಗಿನ ಮರವನ್ನು ಹತ್ತಿದನು. ಹಣ್ಣು ಕಾಯಿಗಳನ್ನು ಕೆಡಹುವದಕ್ಕೆ ಮುಂಚಿತವಾಗಿಯೇ, ಗುಡಿಸಲಿನಲ್ಲಿ ಕಾವಲಿದ್ದ ತೋಟದವನು ಕಂಡು, ಯಾರೆಲೋ ಮರಾ ಹತ್ತಿದವನು? ಎಂದು ಕೂಗಿ ದೊಣ್ಣೆ ತೆಕ್ಕೊಂಡು ಓಡಿ ಬರುವದನ್ನು ಕಳ್ಳನು ನೋಡಿ, ಬೇಗನೆ ಇಳಿದು ಓಡಿ ಹೋಗುತ್ತಿದ್ದನು. ಎಲಾ ತೆಂಗಿನ ಮವನ್ನು ಯಾತಕ್ಕೆ ಹತ್ತಿದಿ? ಎಂದು ತೋಟಗಾರನು ಮಾತಾಡಿಸಲು, ಕರುವಿಗೆ ಹುಲ್ಲು ಕೊಯ್ಯುವದಕ್ಕೆ ಮರದ ಮೇಲೆ ಹತ್ತಿದೆನೆಂದು ಕಳ್ಳನು ಹೇಳಿದನು. ಎಲ ಎಲಾ! ತೆಂಗಿನ ಮರದ ಮೇಲೆ ಹುಲ್ಲಿರುವದೋ? ಎಂದು ತೋಟದವನು ಪುನಹಾ ಕೇಳಿದಕ್ಕೆ, ಕಳ್ಳನು ಹುಲ್ಲು ಇಲ್ಲದ್ದರಿಂದಲೇ ಇಳಿದು ಬಂದೆನು, ಇಷ್ಟು ಮಾತ್ರ ತಿಳಿಯದೋ? ಎಂದು ಅಪಹಾಸ್ಯ ಮಾಡುತ್ತಾ ಓಡಿ ಹೋದನು. ಈ ಮೇರಿಗೆ ಕಳ್ಳರು ಬಹಳವಾಗಿ ಬೊಂಕುವರು.

---

## 11. THE SON-IN-LAW AND HIS COMPANION.

### ೧೧. ಅಳಿಯ ಗಿಳಿಯರು.

ಒಬ್ಬಾನೊಬ್ಬ ಅಳಿಯನು ಅತ್ತೇ ಮನೆಗೆ ಹೋಗುವದಕ್ಕಾಗಿ ತಲೆಗೆ ಸುತ್ತಿ ಕೊಂಡಿದ್ದ ಪಾಗು ಒಂದಲ್ಲದೆ ಮಿಕ್ಕಾದ ಬಟ್ಟೆ

ಗಳನ್ನೆಲ್ಲಾ ಎರವಲಾಗಿ ತೆಗದು ಕೊಂಡು ಉಟ್ಟು ತೊಟ್ಟು ಹೊದ್ದು ಹೊರಟನು. ಆಗ "ಅಳಿಯನ ಹಿಂದೆಗಿಳಿಯ ಎನು" ಎಂಬುವ ಸಾಮತಿಗೆ ಸರಿಯಾಗಿ ತನ್ನ ಸಮ ವಯಸ್ಕನಾದ ಒಬ್ಬ ಸಂಗಾತಿಯನ್ನು ಕರಕೊಂಡು ಮಾರ್ಗದಲ್ಲಿ ಹೋಗುತ್ತಾ ಇರುವಾಗ, ಅಳಿಯನು ಗಿಳಿಯನನ್ನು ನೋಡಿ ಇವನು ತನಗೆ ಬಹಳ ಅಪ್ತನೆಂದು ನೆನಸಿ, ಎಲಾ ಅಣ್ಣಾ, ನೇಸ್ತಗಾರನೇ, ನಾನು ಅತ್ತೆ ಮಾವಂದಿರನ್ನು ಕಂಡು, ಮರಿಯಾದೆಯಿಂದ ಹೆಚ್ಚುಗಟ್ಲೆ ಮಾತನಾಡದೆ ಇರುವೆನು, ಅವರು ನನ್ನ ಮನೆಯ ಯೋಗಕ್ಷೇಮ ಗೃಹಕೃತ್ಯ ಮುಂತಾದ್ದನ್ನೆಲ್ಲಾ ನಿನ್ನನ್ನೇ ಕೇಳುವರು, ಆಗ ನೀನು ಎರವು ಬಟ್ಟೆಗಳನ್ನು ನಾನು ಹೊದ್ದುಕೊಂಡು ಬಂದಿರುವ ನನ್ನ ಬಡತನವನ್ನು ಎಲ್ಯಾದರೂ ತಿಳಿಸೀ ಕಂಡಿಯಾ ಎಂದು ಹೇಳಿ, ಹಾಗುಂಟೇ ಹಾಗುಂಟೇ ಎಂಬದಾಗಿ ಅವನಿಂದ ನಂಬಿಕೆಯನ್ನು ಹೊಂದಿ, ಇಬ್ಬರೂ ಸಾಯಂಕಾಲದ ಹೊತ್ತಿಗೆ ಅತ್ತೇ ಮನೆ ಇರುವ ಊರನ್ನು ಶೇರಿ, ಅವರ ಮನೆಗೆ ಹೋಗಿ ಮನೆಯವರನ್ನೆಲ್ಲಾ ಕಂಡು, ಹಿರಿಯರಿಗೆ ನಮಸ್ಕಾರ, ಕಿರಿಯರಿಗೆ ಆಶೀರ್ವಾದ, ಸಮಾನಸ್ಕಂದರಾದ ಭಾವಮೈದರಿಗೆ ಆಲಿಂಗನ, ಈ ಮೇರಿಗೆ ಅವರವರಿಗೆ ತಕ್ಕ ಮರ್ಯಾದೆಗಳನ್ನು ಮಾಡಿ, ಅದೇ ಮೇರೆಗೆ ಅವರವರಿಂದ ಮರ್ಯಾದೆಗಳನ್ನು ಹೊಂದಿ, ಭೋಜನಾದಿಗಳು ಮಾಡಿದ ತರುವಾಯ, ಸಂತೋಷವಾಗಿ ಕೂತುಕೊಂಡು, ಎಲೆ ಅಡಿಕೆ ಹಾಕಿಕೊಳ್ಳುತ್ತಾ ಇರುವಾಗ, ಅತ್ತೆ ಮಾವಂದಿರು ಮುಂತಾದ ಮನೆಯವರೆಲ್ಲಾ ಗುಂಪಾಗಿ ಕುಳಿತು ಈ ಗಿಳಿಯನನ್ನು ನೋಡಿ, ಅಯ್ಯಾ, ನಮ್ಮ ಅಳಿಯನ ಮನೆಯವರೆಲ್ಲಾ ಕ್ಷೇಮವಾಗಿ ಇದ್ದಾರೆಯೋ? ಇವರ ಗೃಹ

ಕೃತ್ಯ ನಿಮ್ಮದಿಯಾಗಿದೆಯೋ? ಎಂದು ಕೇಳಿದಕ್ಕೆ, ಪ್ರತ್ಯುತ್ತರವಾಗಿ ಈ ಗಿಳಿಯನೆಂಬ ಮಿತ್ರ ದ್ರೋಹಿಯು ನಿಮ್ಮ ಆಳಿಯನು ಸುತ್ತಿ ಕೊಂಡಿರುವ ಪಾಗು ಮಾತ್ರ ಸ್ವಂತನೆಂದು ಬಲ್ಲೆನು, ಕಡಮೆ ಸಮಾಚಾರ ನಾನರಿಯೆ, ನೀವೇ ತಿಳುಕೊಳ್ಳಿರಿ ಎಂತ ಹೇಳಿದನು. ಆಗ ಈ ಮಾರ್ಗಸ್ಥನಾದ ಅಳಿಯನಿಗೆ ಬಹಳ ಲಜ್ಜೆ ಉಂಟಾಯಿತು. ಈ ಮೇರಿಗೆ ಸ್ನೇಹಿತರಿಗೆ ಅವಮಾನವನ್ನು ಮಾಡುವವರೇ ಮಿತ್ರ ದ್ರೋಹಿಗಳು.

---

## 12. THE FATHER GIVES HIS ESTATE TO THE WISEST OF HIS SONS.

## ೧೨. ತಂದೆ ತನ್ನ ಮಕ್ಕಳಲ್ಲಿ ಬುದ್ಧಿವಂತನಿಗೆ ಆಸ್ತಿ ಒಪ್ಪಿಸಿದ್ದು.

ಒಬ್ಬ ಹಣಗಾರನು ಸಾವಿರಾರು ವರಹಾಗಳ ಐಶ್ವರ್ಯ ಉಂಟಾದವನಾಗಿದ್ದು ತನಗೆ ಕಡೆಗಾಲ ಸಮೀಪವಾದ್ದರಿಂದ ತನ್ನ ಆಸ್ತಿಯನ್ನು ಬುದ್ಧಿವಂತನಾದ ಮಗನ ಸ್ವಾಧೀನ ಮಾಡ ಬೇಕೆಂದು ತನಗಿದ್ದ ಇಬ್ಬರು ಮಕ್ಕಳನ್ನು ಕರೆದು, ತಲಾ ಒಂದೊಂದು ರೂಪಾಯಿ ಕೈಗೆ ಕೊಟ್ಟು, ಎಲಾ ಮಕ್ಕಳಿರಾ, ಆಗೋ, ಆ ದೊಡ್ಡ ಮನೆಯನ್ನು ಈ ರೂಪಾಯಿಯಿಂದ ತುಂಬಿಸುವವನಿಗೆ ನನ್ನ ಆಸ್ತಿಯನ್ನೆಲ್ಲಾ ಕೊಡುವೆನು ಎಂದು ಹೇಳಿದನು. ದೊಡ್ಡವನು ಆ ರೂಪಾಯಿಗೆ ಕಬ್ಬು ಸೋಗೆಯ ಹೊರೆಗಳನ್ನು ಜಾಗ್ರತೆಯಾಗಿ ಕೊಂಡು ಕೊಂಡು ಬಂದು, ಮನೆಯೊಳಗೆ ಹಾಕಿಸಿ ಹೊರೆಗಳ ಕಟ್ಟು ಬಿಚ್ಚಿ, ಮೂಲೆ ಮೂಲೆಗೂ ತುಂಬುವ ಹಾಗೆ ಸೋಗೆಯನ್ನೆಲ್ಲಾ ಹರಡಿದ್ದಲ್ಲದೆ ಅಂಗಳನೆಲ್ಲಾ ಕಸಾ ಮಾಡಿ ಬಿಟ್ಟ

ನು. ಚಿಕ್ಕವನಾದ ಎರಡನೇ ಮಗನು ತಂದೆ ಕೊಟ್ಟ ರೂಪಾಯಿಗೆ ಸಣ್ಣ ಸಣ್ಣ ಮೇಣದ ಬತ್ತಿಗಳನ್ನು ಕೊಂಡು ಕೊಂಡು ಬಂದು, ದೀಪಗಳು ಹಚ್ಚಿ, ಅಡಿಗೆ ಮನೆ, ನಡು ಮನೆ, ತೊಟ್ಟಿ ಪಡಸಾಲೆ, ಹಜಾರ, ಸುತ್ತಲಿರುವ ಕೊಠಡಿಗಳು, ನಡವೆ, ಕೈಸಾಲೆ, ಇವುಗಳಿಗೆಲ್ಲಾ ಒಂದು, ಎರಡು, ಮೂರು, ನಾಲ್ಕರ ಮೇರೆಗೆ ಬೇಕಾದಷ್ಟು ದೀಪಗಳು ಹಚ್ಚಿಸಿ, ತಂದೆಯು ಮನೆಯನ್ನೆಲ್ಲಾ ಬೆಳಕಿನಿಂದ ತುಂಬಿದನು. ಆಗ ತಂದೆಯು ಈ ಚಿಕ್ಕ ಮಗನನ್ನು ದೊಡ್ಡವನಿಗಿಂತಲೂ ಬುದ್ಧಿವಂತನೆಂದು ಮೆಚ್ಚಿ, ತನ್ನ ದ್ರವ್ಯವನ್ನೆಲ್ಲಾ ಅವನ ಸ್ವಾಧೀನ ಮಾಡಿ ದೊಡ್ಡವನಿಗೂ ತಕ್ಕಷ್ಟು ಕೊಟ್ಟು, ಇಬ್ಬರೂ ವ್ಯಾಜ್ಯವಾಡದ ಹಾಗೆ ಸಮಾಧಾನ ಪಡಿಸಿದನು. ಇದೇ ಬುದ್ಧಿವಂತರ ಲಕ್ಷಣ.

---

## 13. THE CAKE CHEAT.

### ೧೩. ವಡೆಯ ಮೋಸ.

ಒಬ್ಬ ಬಡ ಬ್ರಾಹ್ಮಣನು ಉದ್ದಿನ ವಡೆ ಮಾಡಿಸಿ ತಿನ್ನ ಬೇಕೆಂದು ಬಹು ಆಶೆ ಪಟ್ಟು, ನಿತ್ಯವೂ ತಾನು ಯಾಚಕ ಮಾಡಿ ಸಂಪಾದಿಸುವ ಕಾಸು ಕವಡೆಗಳಲ್ಲಿ ಗೃಹಕೃತ್ಯದ ವೆಚ್ಚ ಹೋಗಲಾಗಿ ಎರಡೆರಡು ದುಡ್ಡು ಮಿಗಿಸಿ ನಾಲ್ಕಾರು ತಿಂಗಳ ಮೇಲೆ ಈ ಕೂಡಿಸಿದ ದುಡ್ಡುಗಳನ್ನೆಲ್ಲಾ ತೆಕ್ಕೊಂಡು ಪೇಟೆಗೆ ಹೋಗಿ, ಅಕ್ಕಿ ಬೇಳೆ ಮಾರುವ ಅಂಗಡಿಯ ಸಾಲಿನಲ್ಲಿ ಹತ್ತಾಂಗಡಿ ತಿರಿಗಿ ಅಗ್ಗವಾಗಿ ಕೊಡುವ ವರ್ತಕನ ಸಂಗಡ ಒಳ್ಳೆ ಮಾತುಗಳನ್ನಾಡುತ್ತಾ ಕೂತು ಕೊಂಡು, ದರ ಹತ್ತು ಶೇರಿನ ಮೇ

ರೆಗೆ ಒಂದು ಹಣದ ಉದ್ದು, ಒಂದು ಹಣದ ತುಪ್ಪ, ಅಡ್ಡದ ಒಳ್ಳೆ
ಎಣ್ಣೆ, ಹಾಗದ ಮೆಣಸು, ಬೇಳೆ ಕಾಸಿಗೆ ಪಾವು ಜೀರಿಗೆ, ಒಳ್ಳೆ
ಹಿಂಗು ಒಂದು ದುಡ್ಡಿಗೆ, ಈ ಮೇರೆಗೆ ಬೇಕಾದ ಸಾಮಗ್ರಿ ಎಲ್ಲ
ತೆಕ್ಕೊಂಡು ಮನೆಗೆ ಬಂದು ,,ಗೃಹಣೀಗೃಹ ಮುಚ್ಯತೆ ಎಂ
ಬ ನ್ಯಾಯವಾಗಿ ಮನೆಗೆ ಯಜಮಾನಿಯಾದ ಹೆಂಡತಿಯನ್ನು ಕ
ರದು, ಇಗೋ ನೋಡಿದಿಯಾ, ವಡೆ ತಿನ್ನಬೇಕೆಂದು ಬಹಳ ದಿ
ವಸದಿಂದ ಆಶೆ ಪಟ್ಟು, ಬೇಕಾದ ಸಾಮಾನ್ನೆಲ್ಲಾ ತಂದು ಇದ್ದೇ
ನೆ, ಚನ್ನಾಗಿ ಕಮ್ಮಗೆ ಇರುವ ಹಾಗೆ ವಡೆ ಮಾಡು, ತಿಂಬೋಣ
ಎಂದು ಹೇಳಿದನು. ಗಂಡನ ಮಾತನ್ನು ಕೇಳಿ ಹೆಂಡತಿಯು ಬಹು
ಸಂಭ್ರಮದಿಂದ ಅವಸರವಸರವಾಗಿ ಉದ್ದಿನ ಬೇಳೆಯನ್ನು ಒಡ
ದು ಹೊಟ್ಟಿಲ್ಲದೆ ತೊಳದು, ಶೆಬ್ಬಿಯಾಗಿ ರುಬ್ಬಿ, ಉಪ್ಪು ಮೆಣ
ಸು ಜೀರಿಗೆ ಸರಿಯಾಗಿ ಹಾಕಿ, ಸ್ವಲ್ಪ ಹಿಂಗು ತಗಲಿಸಿ, ಆಯ
ಕಟ್ಟು ಮಾಡಿ, ಇಟ್ಟು ಕೊಂಡು, ಒಲೆಗೆ ಬೆಂಕಿ ಹೊದ್ದಿಟ್ಟು
ಉರಿಸಿ, ಬಾಣ್ಲೆ ಕಾಸಿ ಎಣ್ಣೆ ತುಪ್ಪ ಸಹ ಬೆರಸಿ, ತಕ್ಕಷ್ಟು
ಹೊಯಿದು, ಹದವಾಗಿ ಕಾವ ಎಣ್ಣೆಯಲ್ಲಿ ವಡೆಗಳನ್ನು ಬಲಿತ
ಬಾಳೆ ಎಲೆಯ ಕೀಳಿನೊಳಗೆ ತಟ್ಟಿ ತಟ್ಟಿ ನಡುವೆ ತೂತು ಮಾಡಿ
ಜೊಯ್ಯಿ ಎಂದು ಬಾಣ್ಲೆಯಲ್ಲಿ ಹಾಕಿ ಪಕ್ವವಾದ ಕೂಡ್ಲೆ
ಹೊಸ ಪುಟ್ಟಿಯಲ್ಲಿ ಎತ್ತಿ ಎತ್ತಿ ಹಾಕಿ ತುಂಬುತ್ತಾ, ಬಿಸಿಯಾರಿದ
ವಡೆಗಳನ್ನು ಒಂದೊಂದಾಗಿ ಕಬಳಿಸುತ್ತಾ, ಒಳ್ಳೆ ಶೆಬ್ಬಿಯಾಯಿ
ತು ಅಂದುಕೊಂಡು, ಗಂಡನು ಹೇಳಿದ ಮೇರಿಗೆ ನೂರು ವಡೆ
ಸರಿಯಾಗಿ ಸುಟ್ಟಳು. ವಡೆ ಮಾಡಿದ್ದು ಪೂರ್ತಿಯಾಗಿ ಆಗುವವ
ರಿಗೆ ಹೊಸ ಪುಟ್ಟಿಕೆಯಲ್ಲಿ ಒಂದು ವಡೆ ಮಾತ್ರ ಮಿಗಿಸಿ ಮುಚ್ಚಿ
ಟ್ಟು, ಕಡನು ತೊಂಭತ್ತೊಂಭತ್ತು ವಡೆಯನ್ನು ಗಂಡನು ಮ

ನೆಗೆ ಬರುವಾಗ್ಯೆ ದಂಡಿಯಾಗಿ ತಿಂದು ಕೂತುಕೊಂಡಳು. ಆಗ ಆ ಬಡ ಬ್ರಾಹ್ಮಣನು ಸಿದ್ಧವಾಗಿರುವ ವಡೆಗಳನ್ನು ತಿಂದು ತೃಪ್ತಿ ಹೊಂದೋಣ ಎಂದು ಮನೆಗೆ ಬಂದು, ಕೈ ತೊಳಕೊಂಡು ಬಂದು ಇದ್ದೇನೆ, ವಡೆ ಆಯಿತೋ? ತೆಕ್ಕೊಂಡು ಬಾ ಎಂದು ಆಶೆಯಿಂದ ಕೇಳಲು, ಗಂಡನ ಕೈಗೆ ಕಾದ ಎಣ್ಣೆಯಲ್ಲಿ ಕಟ್ಟ ಕಡೆಗೆ ಕರಿದು ಕರ್‍ರಗಿರುವ ಒಂದು ವಡೆಯನ್ನು ಕೊಡುವದಕ್ಕೆ ಬಂದಳು, ಆಗ ಆ ಬ್ರಾಹ್ಮಣನು ನೂರು ವಡೆಗಳಲ್ಲಿ ಈ ಕರಿದು ಹೋದ ಒಂದು ವಡೆಯನ್ನು ನನ್ನ ಕೈಯಲ್ಲಿ ಇಕ್ಕುವದಕ್ಕೆ ಬರುತ್ತೀ ಎನ್ನಲಾಗಿ, ಹೆಂಡತಿ ತೊಂಭತ್ತೊಂಭತ್ತು ವಡೆಗಳನ್ನು ನಾನೇ ತಿಂದು ಬಿಟ್ಟೆನು, ಈ ಒಂದಾದರು ನೀವು ತೆಕ್ಕೊಳ್ಳಿ ಅಂದಳು. ಗಂಡನು ಅಷ್ಟು ಹ್ಯಾಗೆ ತಿಂದಿ? ಎಂತ ಅಂದು ಅನ್ನುವದಕ್ಕೆ ಮುಂಚಿತವಾಗಿಯೇ, ಇಗೋ ಹೀಗೇ ತಿಂದೆನೆಂದು ಆ ಒಂದು ವಡೆಯನ್ನು ಮುರಿದು ಬಾಯಲ್ಲಿ ಹಾಕಿ ಕೊಂಡಳು. ಆಗ ಆ ಬ್ರಾಹ್ಮಣನು "ಆಶಾಶಾಃ ಪರಮಂ ದುಃಖಂ ನಿರಾಶಾಃ ಪರಮಂ ಸುಖಂ" ಎಂದು ಆಶಾಭಂಗದಿಂ ಬೆರಗಾಗಿ ಇಂಥಾ ಹೆಂಗಸು ಸುದಾ ಲೋಕದಲ್ಲಿ ಉಂಟೋ ಎಂದು ನಿಟ್ಟುಸುರು ಬಿಟ್ಟು ಸುಮ್ಮನಾದನು.

---

## 14. THE BRIDE AND BRIDEGROOM.

### ೧೪. ಮದಲಗಿತ್ತಿಯೂ ವರನೂ.

ಒಬ್ಬ ಸ್ತ್ರೀಯು ರೂಪ ಸೌಂದರ್ಯ ಗುಣ ವಿವೇಕಗಳುಳ್ಳ ಪುರುಷನನ್ನು ಹುಡಿಕಿ ನೋಡಿ ಮದುವೆ ಮಾಡಿಕೊಳ್ಳ

ಬೇಕೆಂದು ಆಲೋಚಿಸುತ್ತಾ ಇರಲಾಗಿ, ಈ ವಾರ್ತೆಯ ನ್ನು ಕೇಳಿ, ಕಣ್ಣು ಮೂಗು ಸರಿಯಾಗಿ ಕೈಕಾಲು ಘಟ್ಟಿಯಾಗಿ ಪ್ರಾಯಸ್ಥನಾಗಿ ಕೆಂಪಾಗಿ ಇದ್ದ ಒಬ್ಬ ಮನುಷ್ಯನು ಆ ಸ್ತ್ರೀಯ ಬಳಿಗೆ ಬಂದು ನಿಂತನು. ಅವನು ರೂಪವಂತನಾದಕಾರಣ ಅವನ ಬುದ್ಧಿಯನ್ನು ಪರಿಕ್ಷಿಸ ಬೇಕೆಂದು ಆ ವರನಿಗೆ ತಕ್ಕ ಮರ್ಯಾದೆ ಮಾಡಿ ಕುಳ್ಳಿರಿಸಿದಳು. ಆಗ ಆ ಮದಲಗಿತ್ತಿಯ ಮನೇ ಗೊಂದಿಯಲ್ಲಿ ಚಟ ಚಟಾ ಪಟಪಟಾ ಎಂದು ಸದ್ದಾಯಿತು. ಅದನ್ನು ಕೇಳಿ ಈ ಮನುಷ್ಯನು ಎಲೇ ಹೆಣ್ಣೇ, ಅದೇನು ಗೊಂದಿಯಲ್ಲಿ ಸದ್ದಾಗುತ್ತದೆ ಅನ್ನಲು, ಅದು ಉಡುವಿನ ಸದ್ದು ನಿನಗೆ ಕೇಳಿಸಿತೋ? ಎಂದಳು. ಅದಕ್ಕೆ ಪ್ರತ್ಯುತ್ತರವಾಗಿ ಇವನು ಆ ಹಾ! ಅದು ಉಡುವ್ರೋ, ಅದರ ರೆಕ್ಕೆಗಳಲ್ಲಿ ಎರಡು ಗರಿಗಳನ್ನು ಕಿತ್ತು ಕೊಂಡು ಬಾ, ಕಿವಿ ಚುಚ್ಚು ಕೊಳ್ಳುವದಕ್ಕೆ ಆಗುತ್ತವೆ, ಅನ್ನಲು, ಅವಳು ನಕ್ಕು ರೆಕ್ಕೆಯ ಉಡುವು ಮನೆಗಳಲ್ಲಿರುವದಿಲ್ಲ, ಅಡವಿಗೆ ಹುಡುಕುವದಕ್ಕೆ ಹೋಗು ಎಂದು ಹೇಳಿ ಕಳುಹಿಸಿ ಬಿಟ್ಟಳು. ತರುವಾಯ ಕೆಲವು ದಿವಸದ ಮೇಲೆ ಮತ್ತೊಬ್ಬ ಮನುಷ್ಯನು ಠೀಕಾಗಿ ಬಂದು ಕೂತುಕೊಂಡು ಇವಳನ್ನು ಮದುವೆ ಆಗ ಬೇಕೆಂಬ ಆಶೆಯಿಂದ, ಎಲೇ ಹೆಣ್ಣೇ, ಗಜಸಿಂಬೆ ಹೆಣ್ಣೇ, ನಿನ್ನ ಕಣ್ಣೇ ಕೋಟಿ ವರಹಾ ಬಾಳುವದು, ಮದುವೆ ಯಾತಕ್ಕೆ ಮಾಡಿಕೊಳ್ಳಲಿಲ್ಲ, ಎಂದು ಲೋಕಾಭಿರಾಮವಾಗಿ ಮಾತನಾಡಿಸಲು, ಅವಳು ಹೌದು, ಮದುವೆ ಮಾಡಿ ಕೊಳ್ಳ ಬೇಕು, ನಿನಗೆ ಮದುವೆ ಆಗಿ ಇದೆಯೋ? ಎಂದು ಕೇಳಿದಳು. ಅದಕ್ಕೆ ಅವನು ಇನ್ನೂ ಮದುವೆ ಇಲ್ಲವೆಂದು ಹೇಳಿದನು. ಆಗ ಅವಳು ಉಡುವಿನ ರೆಕ್ಕೆಯ

ಲ್ಲಿ ಕಿವಿ ಚುಚ್ಚಿಕೊಳ್ಳುವ ಬುದ್ಧಿವಂತನನ್ನು ಎಲ್ಲಾದರು ನೋಡಿದ್ದೀಯಾ? ಎನ್ನಲು, ಅದೇನು ಸಮಾಚಾರ ಹೇಳೆಂದು ಕೇಳಿದವನಿಗೆ ಮುಂಚಿನ ಸಂಗತಿಯನ್ನು ತಿಳಿಸಿದಳು. ಅದಕ್ಕೆ ಅವನು ನಕ್ಕು, ರೆಕ್ಕೆಗಳಿರುವ ತಾಂಬೇಲಿ ಎಂದು ಅವನು ತಿಳುಕೊಂಡನೇನೋ ಅಂದನು. ಇವನ ಮಾತಿಗೆ ಆ ಹೆಂಗಸು ಮುಗುಳು ನಗು ನಕ್ಕು, "ಅವಳಲ್ಲವೆಂದು ಇವಳನ್ನು ತಂದರೆ ಇವಳು ಮಡಿಕೆಯಲ್ಲೇ ತಿಂದಳು" ಎಂಬ ಗಾದೆಗೆ ಸರಿಯಾಯಿತೆಂದು ರೆಕ್ಕೆಯ ತಾಂಬೇಲಿಯನ್ನು ಸಮುದ್ರದಲ್ಲಿ ಹುಡುಕ ಹೋಗೆಂದು ಹಾಸ್ಯ ಮಾಡಿ ಕಳುಹಿಸಿ ಬಿಟ್ಟಳು. ಇದೇ ಏನೂ ಅರಿಯದವರ ಲಕ್ಷಣ.

---

## 15. THE BANKER RUINED.

### ೧೫. ಪೋಲಿಶೆಟ್ಟಿ ಪೋಲಾದ್ದು.

ಪ್ರೋಲಿಶೆಟ್ಟಿ ಎಂಬ ಸರಾಫನು, ಪ್ರೋಟನೆಂಬ ಹೆಸರುಳ್ಳ ಆಳನ್ನು ಸಂಗಡ ಕರಕೊಂಡು, ಅವನಿಗೆ ಐದು ಹಣ ಸಂಬಳ ಕೊಟ್ಟು ಬೂಚಿಗಾನ ಹಳ್ಳಿಯ ಸಂತೆಗೆ ಹೋದನು. ಚಿನಿವಾರರು ಸರಾಫ ಚೀಲವನ್ನು ತಮ್ಮ ಹೆಗಲ ಮೇಲೆ ಹೊತ್ತು ಕೊಂಡು ಹೋಗುವ ಕಟ್ಲೆ ಉಂಟಷ್ಟೆ, ಆ ಮೇರೆಗೆ ಅವನು ಚೀಲಾ ಹೊತ್ತು ಕೊಂಡು ಆಳನ್ನು ಕರಕೊಂಡು ಹೊತ್ತಿಗೆ ಸರಿಯಾಗಿ ಸಂತೆಗೆ ಸೇರಿ, ಅಲ್ಲಿ ಚಿನ್ನ ಬೆಳ್ಳಿ ನಾಣ್ಯ ಮುಂತಾದ ವ್ಯಾಪಾರವನ್ನು ಮಾಡಿ ಸಾಯಂಕಾಲಕ್ಕೆ ಎರಡು ಮೂರು ಘಳಿಗೆ ಇರುವಾಗಲೇ ಸಂಚಿ ಕ

ಟ್ಟಿ ತನ್ನ ಸಂಗಡ ಆಳು ಇದ್ದಾನೆಂಬ ಧೈರ್ಯದಿಂದ ಊರಿಗೆ ಹೊರಟನು. ಮಾರ್ಗದಲ್ಲಿ ಬರುತ್ತಾ ಇರುವಾಗ ಭಾವಿಯನ್ನು ಕಂಡು ನೀರು ಕುಡಿಯ ಬೇಕೆಂದು ಆಳು ಹೋಗಲು, ತಾನೊಬ್ಬನೇ ಮಾರ್ಗದಲ್ಲಿ ಹೋಗ ಬಾರದೆಂದು ಪೋಲಿಶೆಟ್ಟಿಯು ಒಂದು ಮರದ ಕೆಳಗೆ ಕೂತು ಕೊಂಡನು. ಆಗ ಆ ಪೋಟನು ಭಾವಿಯಲ್ಲಿ ಇಳಿದು ಬುತ್ತೀ ಗಂಟು ಬಿಚ್ಚಿ ಊಟಾ ಮಾಡಿ ನೀರು ಕುಡಿದು ನಿಕ್ಕಿ ನೀಳ್ಳಿ, ಅಡಿಕೆ ಎಲೆ ಹೊಗೆಸೊಪ್ಪು ಅಗಿಯುತ್ತಾ ಕೂತು ಕೊಂಡನು. ಅವನು ಹೊತ್ತು ಹೋಯಿತು ಕತ್ತಲೆ ಆಯಿತು ಎಂಬ ಭಯ ಲೇಶ ಮಾತ್ರವೂ ಇಲ್ಲದೆ ತನ್ನ ಸಂಬಳದ ಐದು ಹಣವನ್ನು ಸಣ್ಣ ಬಟ್ಟೆಯಲ್ಲಿ ಗಂಟು ಕಟ್ಟಿ ಉಡುದಾರದಲ್ಲಿ ಭದ್ರವಾಗಿ ಕಟ್ಟಿ ಕೊಂಡು ಭಾವಿಯಿಂದ ಎದ್ದು ಹೊರಟು ಎಮ್ಮೇ ಕೋಣನ ಹಾಗೆ ಬರುತ್ತಾ ಇದ್ದನು. ಆ ಆಳನ್ನು ಎದುರು ನೋಡುತ್ತಾ ಇದ್ದ ಶೆಟ್ಟಿಯು ಎಲಾ ಪೋಟಾ, ಬಳ್ಳೆ ಕೆಲಸ ಕೊಟ್ಟೆಯಲ್ಲಾ, ಕತ್ತಲಾಯಿತು, ಸಂತೆಯವರೆಲ್ಲಾ ತಮ್ಮ ತಮ್ಮ ಊರುಗಳನ್ನು ಸೇರಿ ಕೊಂಡರು, ನಾವು ಮನೇ ಸೇರದೆ ಅಡವಿಯಲ್ಲಿ ಸಿಕ್ಕಿ ಪೇಚಾಡುವ ಕಾಲ ಬಂತು, ನಿನ್ನನ್ನು ನಂಬಿ ಹೀಗಾಯಿತು, ಎಂದು ದುಃಖ ಪಟ್ಟನು. ಅವನ ನೋಡಿ ಈ ದಡ್ಡ ಆಳು, ಏನಯ್ಯಪ್ಪಾ, ಶೆಟ್ಟೀ, ಯಾಕೆ ಗೋಳಾಡುತ್ತೀ ? ಕತ್ತಲಾದರೆ ಏನು ! ನಾನಿಲ್ಲವೋ ! ನಿನಗೇನು ಭಯ ? ಇದು ಚಿಕ್ಕ ಅಡವಿ ಆದಾಗ್ಯೂ ದೊಡ್ಡ ದೊಡ್ಡ ಗುಬುರು ಪೊದೆಗಳು ಹಾನೆ ಉಂಟು, ನೀನು ಒಂದು ಪೊದೆಯ ಗುಬುರಿನಲ್ಲಿ ಕೂತುಕೋ, ಚಳಿ ಘಾಳಿ ಇಲ್ಲದೆ ಮನೆಗಿಂತಲೂ ಬೆಚ್ಚಗೆ ಇರುತ್ತದೆ, ಸರಾಫ ಚೀಲ ಮಾತ್ರ ಕಾಲು ಕೆಳಗೆ

ಇಟ್ಟು ಕೊಂಡು ಮಲಗಿ ನಿದ್ದೆ ಹೋಗು, ನಾನು ಕಾಲು ಚಾಚಿ ಕೊಂಡು ಹಾದಿಯಲ್ಲೇ ಬಿದ್ದು ಕೊಳ್ಳುತ್ತೇನೆ, ನನ್ನ ಹತ್ರ ಐದು ಹಣವಿದೆ, ನಿನ್ನ ಹತ್ರ ಅನಾಮತ್ತು ಸರಾಫ ಚೀಲವೇ ಇದೆ ; ಭಯವೇನು ? ಆಗೋದು ಆಗುತ್ತದೆ, ಹೋಗೋದು ಹೋಗುತ್ತದೆ, ಎಂದು ಎಡ್ಡಂತಿಡ್ಡವಾಗಿ ಹೇಳಿದನು. ಆ ಮಾತ ನ್ನು ಕೇಳಿ ದುಃಖದಿಂದಲೂ ಭಯದಿಂದಲೂ ಹೊತ್ತು ಮುಣು ಗುವ ಮಟ್ಟಿಗೂ ನಡದು, ಕತ್ತಲಾಗುವದನ್ನು ಆ ಪೋಲಿಶೆಟ್ಟಿ ಅಡವಿಯ ದಾರಿಗೆ ಹತ್ತೆಂಟು ಬಾರು ಎಡಸಾಗಿರುವ ಉಗಿನೀ ಬಳ್ಳಿಗಳು ಹಬ್ಬಿ ಮುಚ್ಚಿ ಕೊಂಡಿರುವ ಒಂದು ದೊಡ್ಡ ಪೊದೆ ಯಲ್ಲಿ ಹೊಕ್ಕೊಂಡನು. ಆಗ ಈ ದಡ್ಡನು ನೀನಲ್ಲೇ ಇರು, ನಾನಿಲ್ಲೇ ಇರುತ್ತೇನೆ ಎಂದು ಶೆಟ್ಟಿಯ ಸಂಗಡ ಹೇಳಿ ನಟ್ಟಡ ವಿಯ ನಡುದಾರಿಗೆ ಅಡ್ಡವಾಗಿ ಕಾಲು ಚಾಚಿ ಕೊಂಡು "ದೊಡ್ಡ ದೆವ್ವ ಅಡ್ಡ ಬಿತ್ತೆಂಬ" ಸಾಮತಿಗೆ ಸರಿಯಾಗಿ ಬಿದ್ದು ನಿದ್ದೆ ಹೋ ಗಿ ಗೊರಕೆ ಹೊಡೆಯುತ್ತಾ ಇದ್ದನು. ಆಗ ಝಾಮ ಹೊತ್ತಿನ ಮೇಲೆ ರಾತ್ರಿಯ ಕತ್ತಲೆಯಲ್ಲಿ ಹತ್ತೆಂಟು ಮಂದಿ ಕಳ್ಳರು ಕದಿ ಯುವದಕ್ಕೆ ಹೊರಟರು. ಅವರು ಬಿರುಸಾಗಿ ನಡದು ಬರುವಾಗ ದಾರಿಗಡ್ಡವಾಗಿ ಬಿದ್ದಿರುವ ದಡ್ಡನ ಕಾಲನ್ನು ಎಡವಿ, ಇದೇನು ದೊಡ್ಡ ಮೊದ್ದು ಕಟ್ಟಿಗೆ, ಎಂದು ಮಾತನಾಡಿ ಕೊಂಡರು. ಅದ ಕೇಳುತ್ತಲೇ ಕೋಪ ಗೊಂಡು, ಈ ದಡ್ಡನು ಏನೋ ಎಲಾ, ತಿಬ್ಬಿಳಿ ಇಲ್ಲದೆ ಮಾತಾಡುತ್ತೀರಿ, ನಿಮ್ಮ ಮನೆಯ ಮೊದ್ದು ಕ ಟ್ಟಿಗೆಗೆ ನಡುವಿನಲ್ಲಿ ಐದು ಹಣದ ಗಂಟುಂಟೋ? ನಿಮಗೇನು ತಲೆ ತಿರುಗುತ್ತದೋ ? ತುಂಟಾಟ ಆಡುತ್ತೀರಿ, ಕಲ್ಲು ಒಗ ದರೆ ಹಲ್ಲು ಮುರದೀತು ? ನನ್ನ ಹೆಸರು ಪೋಟನು, ನಿಮ್ಮ ಪೋ

ಟಗಾರಿಕೆಯನ್ನು ಹಾರಿಸಿ ಬಿಟ್ಟೇನು, ಎಚ್ಚರಿಕೆ, ಸುಮ್ಮನೆ ಹೋಗಿರಿ ಅಂದನು. ಅವನ ಮಾತನ್ನು ಕೇಳಿ ಕಳ್ಳರೆಲ್ಲಾ ಒಗ್ಗಟ್ಟಾಗಿ ಬಿದ್ದಿದ್ದವನನ್ನು ಮೇಲಕ್ಕೆ ಏಳುವ ಹಾಗೆ ಹಿಡಿದು ಗುದ್ದಿ ಹೊಡದು ಅವನ ನಡುವಿನಲ್ಲಿದ್ದ ಗಂಟನ್ನು ಕಿತ್ತು ಕೊಂಡು ಬಿಚ್ಚಿ, ಈ ಹಣಗಳು ಒಳ್ಳೇದೋ ಸಲ್ಲದ್ದೋ? ಎಂದು ಕೊಂಡರು. ಈ ದಪ್ಪನು ನನಗೆ ಸಂಬಳ ಕೊಟ್ಟ ಪ್ರೋಲಿಶೆಟ್ಟಿ ಪ್ರೊದೆಯಲ್ಲಿ ಕೂತಿದ್ದಾನೆ, ನೋಟ ನೋಡಿಸಿ ಕೊಳ್ಳಿ, ಸರಾಫ ನು ಸಲ್ಲದ ಹಣಗಳು ಕೊಟ್ಟಾನೋ ? ಎಂದು ಬೆರಳ ಸೈಗೆಯಿಂ ದ ವರ್ತಕನನ್ನು ತೋರಿಸಿದನು. ಆಗ ಕಳ್ಳರು ವರ್ತಕನ ಮೇಲೆ ಬಿದ್ದು ಹೊಡದು ಫಜೀತಿ ಮಾಡಿ ಹಣದ ಚೀಲಾ ಕಿ ತ್ತು ಕೊಂಡು ಹೋದರು. ಆಗ ಆ ವರ್ತಕನು ದುಃಖದಿಂದ ಈ ಧಡ್ಡನನ್ನು ಬಹಳವಾಗಿ ಬೈದನು. ಅದಕ್ಕೆ ಬದಲಿಗೆ ಅ ವನು ಶೆಟ್ಟಿಯನ್ನು ಬೈದನು. ಆ ಶೆಟ್ಟಿಯು ಎಜಮಾನ ನಾದ ನನ್ನನ್ನು ಶೇವಕನಾದ ನೀನು ಬೈಯ್ಯ ಬಹುದೋ? ಎಂ ದಾಕ್ಷೇಪಿಸಲು, ನೀನು ಬೈದಿ, ನಾನೂ ಬೈದೆ, ಗಜಾಲಿನಲ್ಲಿ ಗಜಾ ಲು ಸರಿ ಹೋಯಿತು, ಈ ಸಮಯವಲ್ಲದೆ ನಾಳೆ ನಿನ್ನ ಬೈದ ರೆ ಸುಮ್ಮನೆ ಬಿಟ್ಟೇಯಾ ? ಎಂದು ಒಡಂಬಡಿಸಿದನು. ಆದ್ದ ರಿಂದ ದಪ್ಪರನ್ನು ಜೊತೆಗೆ ಶೇರಿಸಿ ಕೊಳ್ಳ ಬಾರದು, ಶೇರಿಸಿ ಕೊಂಡರೆ ಕಡೆ ಮೊದಲಿಲ್ಲದ ಅನರ್ಥ ಉಂಟಾದೀತು.

---

ಇಟ್ಟು ಕೊಂಡು ಮಲಗಿ ನಿದ್ದೆ ಹೋಗು, ನಾನು ಕಾಲು ಚಾಚಿ ಕೊಂಡು ಹಾದಿಯಲ್ಲೇ ಬಿದ್ದು ಕೊಳ್ಳುತ್ತೇನೆ, ನನ್ನ ಹತ್ರ ಐದು ಹಣವಿದೆ, ನಿನ್ನ ಹತ್ರ ಅನಾಮತ್ತು ಸರಾಫ ಚೀಲವೇ ಇದೆ ; ಭಯವೇನು ? ಆಗೋದು ಆಗುತ್ತದೆ, ಹೋಗೋದು ಹೋಗುತ್ತದೆ, ಎಂದು ಎಡ್ಡಂತಿಡ್ಡವಾಗಿ ಹೇಳಿದನು. ಆ ಮಾತನ್ನು ಕೇಳಿ ದುಃಖದಿಂದಲೂ ಭಯದಿಂದಲೂ ಹೊತ್ತು ಮುಣುಗುವ ಮಟ್ಟಿಗೂ ನಡದು, ಕತ್ತಲಾಗುವದನ್ನು ಆ ಪೋಲಿಶೆಟ್ಟಿ ಅಡವಿಯ ದಾರಿಗೆ ಹತ್ತೆಂಟು ಬಾರು ಎಡಸಾಗಿರುವ ಉಗಿನೀ ಬಳ್ಳಿಗಳು ಹಬ್ಬಿ ಮುಚ್ಚಿ ಕೊಂಡಿರುವ ಒಂದು ದೊಡ್ಡ ಪೊದೆಯಲ್ಲಿ ಹೊಕ್ಕೊಂಡನು. ಆಗ ಈ ದಡ್ಡನು ನೀನಲ್ಲೇ ಇರು, ನಾನಿಲ್ಲೇ ಇರುತ್ತೇನೆ ಎಂದು ಶೆಟ್ಟಿಯ ಸಂಗಡ ಹೇಳಿ ನಟ್ಟಡವಿಯ ನಡುದಾರಿಗೆ ಅಡ್ಡವಾಗಿ ಕಾಲು ಚಾಚಿ ಕೊಂಡು "ದೊಡ್ಡ ದೆವ್ವ ಅಡ್ಡ ಬಿತ್ತೆಂಬ" ಸಾಮತಿಗೆ ಸರಿಯಾಗಿ ಬಿದ್ದು ನಿದ್ದೆ ಹೋಗಿ ಗೊರಕೆ ಹೊಡೆಯುತ್ತಾ ಇದ್ದನು. ಆಗ ಝಾಮ ಹೊತ್ತಿನ ಮೇಲೆ ರಾತ್ರಿಯ ಕತ್ತಲೆಯಲ್ಲಿ ಹತ್ತೆಂಟು ಮಂದಿ ಕಳ್ಳರು ಕದಿಯುವದಕ್ಕೆ ಹೊರಟರು. ಅವರು ಬಿರುಸಾಗಿ ನಡದು ಬರುವಾಗ ದಾರಿಗಡ್ಡವಾಗಿ ಬಿದ್ದಿರುವ ದಡ್ಡನ ಕಾಲನ್ನು ಎಡವಿ, ಇದೇನು ದೊಡ್ಡ ಮೊದ್ದು ಕಟ್ಟಿಗೆ, ಎಂದು ಮಾತನಾಡಿ ಕೊಂಡರು. ಅದ ಕೇಳುತ್ತಲೇ ಕೋಪ ಗೊಂಡು, ಈ ದಡ್ಡನು ಏನೋ ಎಲಾ, ತಿಬ್ಬಿಳಿ ಇಲ್ಲದೆ ಮಾತಾಡುತ್ತೀರಿ, ನಿಮ್ಮ ಮನೆಯ ಮೊದ್ದು ಕಟ್ಟಿಗೆಗೆ ನಡುವಿನಲ್ಲಿ ಐದು ಹಣದ ಗಂಟುಂಟೋ? ನಿಮಗೇನು ತಲೆ ತಿರುಗುತ್ತದೋ ? ತುಂಟಾಟ ಆಡುತ್ತೀರಿ, ಕಲ್ಲು ಒಗದರೆ ಹಲ್ಲು ಮುರದೀತು ? ನನ್ನ ಹೆಸರು ಪೋಟನು, ನಿಮ್ಮ ಪೋ

ಟಿಗಾರಿಕೆಯನ್ನು ಹಾರಿಸಿ ಬಿಟ್ಟೇನು, ಎಚ್ಚರಿಕೆ, ಸುಮ್ಮನೆ ಹೋಗಿರಿ ಅಂದನು. ಅವನ ಮಾತನ್ನು ಕೇಳಿ ಕಳ್ಳರೆಲ್ಲಾ ಒಗ್ಗಟ್ಟಾಗಿ ಬಿದ್ದಿದ್ದವನನ್ನು ಮೇಲಕ್ಕೆ ಏಳದ ಹಾಗೆ ಹಿಡಿದು ಗುದ್ದಿ ಹೊಡೆದು ಅವನ ನಡುವಿನಲ್ಲಿದ್ದ ಗಂಟನ್ನು ಕಿತ್ತು ಕೊಂಡು ಬಿಚ್ಚಿ, ಈ ಹಣಗಳು ಒಳ್ಳೇದೋ ಸಲ್ಲದ್ದೋ? ಎಂದು ಕೊಂಡರು. ಈ ದಸ್ತನು ನನಗೆ ಸಂಬಳ ಕೊಟ್ಟ ಪ್ರೋಲಿಶೆಟ್ಟಿ ಪ್ರೊಡೆಯಲ್ಲಿ ಕೂತಿದ್ದಾನೆ, ನೋಟ ನೋಡಿಸಿ ಕೊಳ್ಳಿ, ಸರಾಫನು ಸಲ್ಲದ ಹಣಗಳು ಕೊಟ್ಟಾನೋ? ಎಂದು ಬೆರಳ ಸೈಗೆಯಿಂದ ವರ್ತಕನನ್ನು ತೋರಿಸಿದನು. ಆಗ ಕಳ್ಳರು ವರ್ತಕನ ಮೇಲೆ ಬಿದ್ದು ಹೊಡೆದು ಫಜೀತಿ ಮಾಡಿ ಹಣದ ಚೀಲಾ ಕಿತ್ತು ಕೊಂಡು ಹೋದರು. ಆಗ ಆ ವರ್ತಕನು ದುಃಖದಿಂದ ಈ ಧಡ್ಡನನ್ನು ಬಹಳವಾಗಿ ಬೈದನು. ಅದಕ್ಕೆ ಬದಲಿಗೆ ಅವನು ಶೆಟ್ಟಿಯನ್ನು ಬೈದನು. ಆ ಶೆಟ್ಟಿಯು ಎಜಮಾನನಾದ ನನ್ನನ್ನು ಶೇವಕನಾದ ನೀನು ಬೈಯ್ಯ ಬಹುದೋ? ಎಂದಾಕ್ಷೇಪಿಸಲು, ನೀನು ಬೈದಿ, ನಾನೂ ಬೈದೆ, ಗಜಾಲಿನಲ್ಲಿ ಗಜಾಲು ಸರಿ ಹೋಯಿತು, ಈ ಸಮಯವಲ್ಲದೆ ನಾಳೆ ನಿನ್ನ ಬೈದರೆ ಸುಮ್ಮನೆ ಬಿಟ್ಟೇನೂ? ಎಂದು ಒಡಂಬಡಿಸಿದನು. ಆದ್ದರಿಂದ ದಡ್ಡರನ್ನು ಜೊತೆಗೆ ಶೇರಿಸಿ ಕೊಳ್ಳ ಬಾರದು, ಶೇರಿಸಿ ಕೊಂಡರೆ ಕಡೆ ಮೊದಲಿಲ್ಲದ ಅನರ್ಥ ಉಂಟಾದೀತು.

---

## 16. THE POOR RYOT AND THE IDOL.

### ೧೬. ಬಡ ಒಕ್ಕಲಿಗನೂ ಜಿನ್ನೇದೇವರೂ.

ಒಬ್ಬ ಒಕ್ಕಲಿಗನು ಜೀತಗಾರನಾಗಿದ್ದು, ಸಂಬಳಕ್ಕೆ ಬರುವ ಮೂರು ಖಂಡಗದ ಪತ್ತು ಕೊಳಗದ ರಾಗಿಯಲ್ಲೇ ಹೊಟ್ಟೆ ಹೊರಕೊಳ್ಳುತ್ತಾ, ಮೇಲಿನ ಹದಿನೈದು ಹಣವನ್ನು ಮೂರು ವರುಷ ಕೂಡಿಸಿ, ಆದ ನಾಲ್ವತ್ತೈದು ಹಣಕ್ಕೆ ಎರಡು ಎತ್ತಿನ ಗಿಡ್ಡಗಳನ್ನು ಕ್ರಯಕ್ಕೆ ತೆಕ್ಕೊಂಡನು. ಆ ಮೇಲಿ ಬಂದೇರಿನ ಆರಂಬ ಮಾಡಿ ಇಪ್ಪತ್ತು ಖಂಡಗ ರಾಗಿ ಹಗೇದಲ್ಲಿ ಹಾಕಿ, ಹಾಗೆಯೇ ಆರಂಬವನ್ನು ಬಲ ಮಾಡುತ್ತಾ ಮಾಡುತ್ತಾ ಹತ್ತೆಂಟು ವರುಷದಲ್ಲಿ ಪತ್ತು ಏರು ಕಟ್ಟಿ ಉಳುವ ದೊಡ್ಡ ಸಂಸಾರಿಯಾಗಿ, ಅದಕ್ಕೆ ತಕ್ಕ ಹಾಗೆ ಅರವತ್ತು ಎಪ್ಪತ್ತು ರೂಪಾಯಿ ಕಂದಾಯಾ ಸರಕಾರಕ್ಕೆ ಕಟ್ಟುತ್ತಾ ಇದ್ದನು. ಹೀಗಿರುವಲ್ಲಿ ದೈವ ಗತಿಯಿಂದ ಮಳೆ ಇಲ್ಲದೆ ಬೆಳೆಗಳು ಕೆಟ್ಟು ಹೋಯಿತು. ಹೀಗೆ ಆಗುವದು ತಿಳಿಯದೆ ಮುಂಚಿತವಾಗಿಯೇ ತನ್ನಲ್ಲಿ ಇದ್ದ ನೂರಾರು ಖಂಡುಗ ರಾಗಿಯನ್ನು ಬಡವರಿಗೆ ಬಗ್ಗರಿಗೆ ತಲಪಾಶಿಗೆ ಕೊಟ್ಟು ಬಿಟ್ಟನು. ಶೀಮೆಗೆಲ್ಲಾ ಬೆಳೆ ಹೋದ್ದರಿಂದ ಇವನು ಬಡವರ ಸಂಗಡ ಬಡವನಾದನು. ಆಗ ಕಂದಾಯಾ ಕಟ್ಟುವದಕ್ಕೆ ಸಹ ಠಿಕಾಣಿ ಇಲ್ಲದೆ ಎರಡು ಮೂರು ವರುಷದಲ್ಲಿ ಎತ್ತು ಕರು ಬದುಕು ಬಾಳು ಒಡವೆ ವಸ್ತು ಮುಂತಾದ್ದನ್ನೆಲ್ಲಾ ಮಾರಿ ಸರಕಾರದ ಕಂದಾಯಕ್ಕೆ ಕಟ್ಟಿದಾಗ್ಯೂ ತೀರದೆ, ಕಡೇ ಬಿಸ್ತಿನ ತಗಾದಿಗೆ ಭಯ ಪಟ್ಟು ಹರಕು ಬಟ್ಟೆಯನ್ನು ನೆಟ್ಟಗೆ ಕಟ್ಟಿ ಕೊಳ್ಳುವದಕ್ಕೆ ಹೊತ್ತು ಕಾ

ಣದೆ ಓಡಿ ಹೋದನು. ಆದಾಗ್ಯೂ ಬಿಡದೆ ಒಕ್ಕಲಿಗನು ಮುಂದೆ, ತೋಟ ತಳಾರಿಗಳು ಹಿಂದೆ, ಓಡುತ್ತಾ ಓಡುತ್ತಾ, ದಾರಿಯಲ್ಲಿದ್ದ ಜೆನ್ನೆ ದ್ಯಾವರ ಗುಡಿಯನ್ನು ಈ ಒಕ್ಕಲಿಗನು ಹೊಕ್ಕು ಬೆತ್ತಲೆಯಾಗಿರುವ ಆ ದ್ಯಾವರ ಹಿಂದೆ ಅವಿತು ಕೊಂಡನು. ತೋಟ ತಳವಾರರು ಹಿಂದಟ್ಟಿ ಬಂದು, ಗುಡಿ ಒಳಗೆ ಹೋಗ ತಕ್ಕವರಲ್ಲದ್ದರಿಂದ ಹೊರಗೆ ನಿಂತರು. ಆಗ ಆ ರೈತನು ಬದುಕು ಜೀವನೇ, ಬದುಕು ಜೀವನೇ, ಎಂದು ರವಷ್ಟು ಹೊತ್ತು ದಣುವಾರಿಸಿ ಕೊಂಡು, ಆ ಪ್ರತಿಮೆಯನ್ನು ನೋಡಿ, ಅಯ್ಯಾ ಜೆನ್ನಪ್ಪಾ, ನಾನು ಪತ್ತೇರು ಮಾಡಿ ದಂಡಾ ತೆತ್ತು ಹರಕು ಅರಿವೆ ಬಿರಸಿ ಓಡಿ ಬಂದೆನಲ್ಲಾ? ನೀನು ಎಷ್ಟೇರು ಮಾಡಿದಿಯೋ? ಎಷ್ಟು ದಂಡಾ ತೆತ್ತೆಯೋ? ಬೆತ್ತಲೆಯಾಗಿ ನಿಂತಿದ್ದಿಯಲ್ಲಾ! ಎಂದು ತಬ್ಬಿ ಕೊಂಡು ಅತ್ತನು. ಇದಕ್ಕೆ ಸಾಮ್ಯ, ಜೆನ್ನೆ ದ್ಯಾವರ ಮನೆಗೆ ಬೈರೆ ದ್ಯಾವರು ಹೋಗಿ, ಅಣ್ಣಾ, ನಾನು ಛಳಿಗೆ ಅದುರುತ್ತೇನೆ, ಒಂದು ಹಚ್ಚಡವಾದರು ಕೊಡ ಬಾರದೇ, ಎಂದು ಎರಡು ಕೈ ಚಾಚಿ ಬೇಡಿ ಕೊಂಡದ್ದಕ್ಕೆ, ಜೆನ್ನೆ ದೇವರು ನನ್ನ ಬಾಳು ನೀನರಿಯೆಯೋ? ಕಣ್ಣೊರಸಿ ಕೊಂಬುವದಕ್ಕೆ ಹಳೇ ಬಟ್ಟೆ ಇಲ್ಲದವನಾಗಿದ್ದೇನೆ, ಓಡುವವನೂ ಬೆತ್ತಲೆ, ತರುಮುವವನೂ ಬೆತ್ತಲೆ, ಎಂತ ಹೇಳಿದನು.

## 17. THE SHEPHERD LISTENING TO THE RAMAYANA.

### ೧೭. ಕುರುಬನು ರಾಮಾಯಣ ಕೇಳಿದ್ದು.

ಬೆಂಗಳೂರು ಅಂಗಡಿ ಬೀದಿಗಳಲ್ಲಿ ರಾಮಾಯಣ ಮುಂತಾದ ಕಥೆಗಳನ್ನು ಪುರಾಣ ಹೇಳುತ್ತಾ ಇರುವದುಂಟಷ್ಟೆ? ಆ ಪುರಾಣೀಕರಿಗೆ ಪೇಟೆ ಪುರಾಣೀಕರೆಂದೂ ಆಕಾಶ ಪುರಾಣೀಕರೆಂದೂ ಹೆಸರು ಉಂಟಷ್ಟೆ. ಒಂದು ದಿವಸ ಒಬ್ಬ ಕುರುಬತಿ ಹುಲ್ಲು ಹೊರೆಯನ್ನು ಮಾರುವದಕ್ಕೆ ಸಾಯಂಕಾಲದಲ್ಲಿ ಪೇಟೆಗೆ ಬಂದು, ಅಂಗಡಿ ಸಾಲಿನಲ್ಲಿ ಹೊರೆಯನ್ನು ಇಳಿಸಿ ಇಟ್ಟು ಕೊಂಡು, ತನ್ನ ಹೊರೆಗೆ ಹೆಚ್ಚು ಬೆಲೆಯನ್ನು ಹೇಳುತ್ತಾ ಹೇಳುತ್ತಾ ಒಬ್ಬರೂ ಕ್ರಯಕ್ಕೆ ತೆಕ್ಕೊಳ್ಳದ್ದರಿಂದ, ರಾತ್ರಿ ಏಳು ಘಂಟೇವರಿಗೂ ಕೂತು ಕೊಂಡಿದ್ದಳು. ಹೀಗಿರುವಲ್ಲಿ ಅವಳಿಗೆ ಎದುರಾಗಿರುವ ಅಂಗಡಿಯಲ್ಲೇ ಪುರಾಣದ ಪ್ರಾರಂಭವಾಯಿತು. ಅದು ರಾಮಾಯಣದ ಕಥೆಯಾಗಿತ್ತು. ಅದನ್ನು ಅವಳು ಕೇಳುತ್ತಾ ಕೇಳುತ್ತಾ ಆ ಕಥೆಯ ಸ್ವಾರಸ್ಯವು ಅವಳ ಮನಸ್ಸಿಗೆ ಸ್ವಲ್ಪ ಸ್ವಲ್ಪವಾಗಿ ತಿಳಿಯುತ್ತಾ ಇತ್ತು. ಅಷ್ಟು ಮಾತ್ರಕ್ಕೆ ಸಂತೋಷವನ್ನು ಹೊಂದಿದ ಕುರುಬಿತಿಯು ಮನೆಗೆ ಹೋಗ ಮರತಳು. ಹುಲ್ಲು ಹೊರೆ ಬೆಲೆಯಾಗದ ಕಾರಣವೂ ಇತ್ತು. ಆಗ ಪುರಾಣಾ ಕೇಳುವದಕ್ಕೆ ಬಂದ ಜನರು ಯಾವತ್ತೂ ಒಂಭತ್ತು ಹತ್ತು ಘಂಟೇ ಪರಿಯಂತರವೂ ಇದ್ದು ಕಥಾಶ್ರವಣ ತೀರುತ್ತಲೇ ಕೈಗಳು ಮುಗಿಯುತ್ತಾ ತಮ್ಮ ತಮ್ಮ ಮನೆಗಳಿಗೆ ಹೋದರು. ಅಷ್ಟು ಹೊತ್ತಿನಲ್ಲಿ ಪರಸ್ಥಳದ

ಕುದುರೆಯವನು ಹುಲ್ಲಿಗಾಗಿ ಬಂದು ಈ ಕುರುಬತಿಯ ಹುಲ್ಲು ಹೊರೆಯನ್ನು ನೋಡಿ ಅವಳು ಹೇಳಿದ ಮೇರೆಗೆ ಅಷ್ಟದ ಹೊರೆಗೆ ಹಣ ಕೊಟ್ಟು ಹೊರಿಸಿಕೊಂಡು ಹೋದನು. ಆ ವೇಳೆ ಕುರುಬತಿಯು ಬಂದು ಹಣದ ದುಡ್ಡು ಕೈಯಲ್ಲಿ ಕಟ್ಟಿಕೊಂಡು, ರಾಮಾಯಣವೂ ಕೇಳಿ, ಅವಸರವಸರದಿಂದ ಮನೆಗೆ ಹೋದಳು. ಮನೆಯಲ್ಲಿ ಅವಳ ಗಂಡನು ಹೆಂಡತಿ ಬರಲಿಲ್ಲವೆಂದು ಎದುರು ನೋಡುತ್ತಾ ಇದ್ದು ಬೇಗ ಬೇಗ ಬಂದವಳನ್ನು ಇಷ್ಟು ಹೊತ್ತು ಏನು ಮಾಡಿದಿ ಎಂದು ಗದ್ದಿಸಿ ಕೇಳಿದನು. ಅದಕ್ಕೆ ತನ್ನ ವರ್ತಮಾನವೆಲ್ಲಾ ತಿಳಿಸಿ ಒಡಂಬಡಿಸಿದಳು. ಸಂಗಡಲೇ ಹಿಟ್ಟು ಸೊಪ್ಪು ಮಾಡಿ ಇಬ್ಬರೂ ಉಂಡು, ಮಲಗೋ ಸಮಯದಲ್ಲಿ ಈ ಕುರುಬನು ಮುದ್ದಿ ಮನುಷ್ಯನಾದ್ದರಿಂದ ಹೆಂಡತಿಯ ಸಂಗಡ ದೊಡ್ಡ ವ್ಯಾಜ್ಯ ಕಿತ್ತನು. ಪೇಟೆಯಲ್ಲಿ ಇಷ್ಟು ಹೊತ್ತು ಏನು ಮಾಡಿದಿ ಎಂಬುವದೇ ಅವರ ಜಗಳಕ್ಕೆ ಮೊದಲಾಗಿ, ಹೀಗೆ ಕೇಳುವ ಕುರುಬನಿಗೆ ಕುರುಬತಿಯು ನಾನು ಇಷ್ಟು ಹೊತ್ತು ಪೇಟೆಯಲ್ಲಿ ಇದ್ದು ಬಂದೆನೆಂದು ತಪ್ಪೆಣಿಸ ಬೇಡ, ಅಂಥಾ ತಪ್ಪು ಕೆಲಸ ಏನೂ ಮಾಡಲಿಲ್ಲ, ಅಷ್ಟದ ಹುಲ್ಲು ಹೊರೆಗೆ ಹೆಚ್ಚಾಗಿ ಅಷ್ಟ ಸಿಕ್ಕಿತು, ಇದಲ್ಲದೆ ರಾಮಾಯಣದ ಕಥೆ ಚನ್ನಾಗಿ ಕೇಳಿದೆನು, ನಾಳೆ ನೀನು ಹೋಗಿ ಕೇಳಿ ಬಿಟ್ಟು ಬಂದರೆ ನಿನ್ನ ಬರಟಾಟ ಹೋಗಿ ತಿಬ್ಬಳಿ ಬರುತ್ತದೆ, ಎಂದು ಹಣದ ದುಡ್ಡು ಕೈಲಿಕ್ಕಿದಳು. ಆಗ ಕುರುಬನು ಸುಮ್ಮನಾದನು. ಮರು ದಿವಸ ಸಾಯಂಕಾಲದ ವರೆಗೂ ಕುರಿ ಮೇಯಿಸಿ ಮನೆಗೆ ಬಂದು, ಯಾರೇ ಅವಳು, ಮನೆಯಲ್ಲಿ ನನಗೆ ತಂಗಳಕ್ಕಿ, ರಾಮಾಯ

ಕೇಳುವದಕ್ಕೆ ಹೋಗ ಬೇಕು, ನಾನು ಬರುವಾಗ್ಯೆ ಬಿಸಿ ಹಿಟ್ಟ ಮಾಡಿರು, ಎಂದು ಹೇಳಿ, ತಂಗಳುಂಡು ಹೋಗಿ ಸಂಜೆ ಆರೂವರೆ ಘಂಟೆಗೆ ಪುರಾಣದ ಅಂಗಡಿಯ ಮುಂದೆ ಕಂಬಳಿ ಕೊಪ್ಪೆ ಹಾಕಿ ಕೊಂಡು ಕೋಲೂರಿ ಕೊಂಡು ನಿಂತು ಕೊಂಡನು. ಸಂಗಡ ಲೇ ಪುರಾಣ ಪ್ರಾರಂಭವಾಯಿತು. ಆ ದಿವಸ ರಾವಣಾಸುರನ ದೊಡ್ಡ ಮಗನಾದ ಇಂದ್ರಜಿತ್ತಿಗೂ ರಾಮಸ್ವಾಮಿಯ ತಮ್ಮ ನಾದ ಲಕ್ಷ್ಮಣಸ್ವಾಮಿಗೂ ನಡದ ಯುದ್ಧವು ಪ್ರಸಂಗಿಸಲ್ಪಟ್ಟಿ ತು. ಆ ಮಹಾ ಅದ್ಭುತವಾದ ಕಥೆಯನ್ನು ಕೇಳುವದಕ್ಕೆ ಬಹು ಜನ ಸಂಘ ಕೂಡಿ ಇತ್ತು. ಕೂತು ಕೊಳ್ಳುವ ಜನರಿಗೆ ಬೀದಿಯಲ್ಲಿ ಸ್ಥಳ ಸಾಲದೆ, ನಿಂತುಕೊಂಡೇ ಕೇಳುತ್ತಾ ಇದ್ದ ರು. ಆಗ ಈ ಮುದ್ದಿ ಕುರುಬನು ಕೋಲೂರಿ ನಿಂತು ಕೊಂ ಡು ಕೇಳುತ್ತಾ ಇರುವಾಗ, ಮತ್ತೊಬ್ಬ ಪೋಟನು ಇವನ ಬೆನ್ನು ಮೇಲೆ ಬಂದು ಕೂತು ಕೊಂಡನು. ಹೀಗೆ ಇವನು ಅವನನ್ನು ಹೊತ್ತು ಕೊಂಡು ಕಟ್ಟ ಕದಲದೆ ಮೆದಲದೆ ರಾತ್ರಿ ಯೆಲ್ಲಾ ಕಥೆ ಕೇಳುತ್ತಾ ಇದ್ದನು. ತರುವಾಯ ಪುರಾಣ ಹೇಳಿದ್ದು ಆಯಿತು. ಜನರೆಲ್ಲರು ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು. ಈ ಕುರುಬನೂ ಮನೆಗೆ ಬಂದನು. ಅವನನ್ನು ನೋಡಿ, ಕುರುಬಿತಿಯು ಏನು ರಾಮಾಯಣ ಕೇ ಳಿ ಬಂದೆಯೋ ? ಎಂದು ಮಾತಾಡಿಸಿದಳು ; ಅದಕ್ಕೆ ಆ ಕುರು ಬನು ರಾಮಾಣ್ಯ ಎಂಬೋದು ಸಾಮಾನ್ಯವಲ್ಲ, ಆಳಗಾಳು ಬಾಳ ಬಾರಕಾಣೇ ಅಂದನು. ಅದನ್ನು ಕೇಳಿ ಇವನ ಮೇಲೆ ಯಾರೋ ಬಂದು ಕೂತು ಕೊಂಡರು, ಅವನ್ನ ಇಳಿ ಎಂಬು ವದಕ್ಕೆ ತಿಳ್ವಳಿ ಇಲ್ಲದೆ, ರಾತ್ರಿಯಲ್ಲಾ ಬೆನ್ನು ಮುರಿಯು

ವ ಹಾಗೆ ಹೊತ್ತು ಕೊಂಡು ಇದ್ದು ಬಂದನೆಂದು ನಿಶ್ಚೈಸಿ, ಹೆಂಡತಿ ಗಂಡನನ್ನು ನೋಡಿ ರಾಮಾಯಣವೆಂಬುವದು ಸಾಮಾನ್ಯವಲ್ಲವ್ರೋ? ಆಳಿಗೆ ಆಳು ಬಹಳ ಭಾರವ್ರೋ? ಚನ್ನಾಯಿತು, ನಿನ್ನ ದಡ್ಡ ತನಕ್ಕೆ ನಾನೇನನ್ನಲಿ? ಎಂದು ವ್ಯಸನ ಪಟ್ಟಳು. ಕುರುಬ ನೆಂಬ ಮಾತು ಮಂಕನೆಂಬ ಅರ್ಥದಲ್ಲಿ ರೂಢಿಯಾಗಿರುವದಕ್ಕೆ ಈ ಕಥೆ ಒಳ್ಳೇ ಸಾಮತಿ.

---

## 18. THE SINGER AND THE WASHERWOMAN.

### ೧೮. ಹಾಡುವವನೂ ಅಗಸಗಿತ್ತಿಯೂ.

ಒಬ್ಬ ಸಂಗೀತಗಾರನ ಬಳಿಗೆ ಹಾಡಿಕೆ ಕಲಿಯ ಬೇಕೆಂದು ಮತ್ತೊಬ್ಬನು ಬಂದು ನಾಲ್ಕಾರು ವರುಷದ ವರಿಗೂ ಬರಳಿ ಬರಳಿ ಕಷ್ಟ ಪಟ್ಟನು. ಎಷ್ಟು ದಿನ ಕೂಗಿ ಕಷ್ಟ ಪಟ್ಟಾಗ್ಯೂ ಇದು ತಪ್ಪು ಇದು ಮೆಪ್ಪು, ಇದು ಒಪ್ಪು ಇದು ನೆಪ್ಪು, ಎಂಬ ಸ್ವರ ಜ್ಞಾನ ಹುಟ್ಟದೆ ಹೋಯಿತು. ಆಗ ಇವನಿಗೆ ವಿದ್ಯ ಹೇಳುವವನಿಗೆ ಬೇಸರಿಕೆ ಹುಟ್ಟಿ, ಛೀ! ಛೀ! ಎಷ್ಟುವರಿಗೆ ನಿನ್ನ ಸಂಗಡ ನಾನಳಲಿ, ನನ್ನ ಕೈಲಾಗದು, ನಿನ್ನ ತಪ್ಪು ನಿನಗೆ ತಿಳಿಯದು, ಹೋಗೆಂದು ಕಳುಹಿಸಿ ಬಿಟ್ಟನು. ಆಗ ಇವನು ಕೋಪದಿಂದ ಹೊರಟು ಅಲ್ಲೊಂದು ಇಲ್ಲೊಂದು ಬಟ್ಟೆ ಬರೆ ಸಂಪಾದಿಸಿ ಕೊಂಡು, ಈ ಸಂದು ಬೊಂದುಗಳಲ್ಲಿ ತಿರುಗುವದು ಯಾತಕ್ಕೆ? ಒಬ್ಬ ಅರಸನ ಬಳಿಗೆ ಹೋಗಿ ಹಾಡಿ ಮೆಚ್ಚಿಸಿ ಬಹುಮಾನಾ ಸಂಪಾದಿಸ ಬೇಕೆಂದು ಒಂದು ಪಟ್ಣಕ್ಕೆ ಬಂದು, ಏಕಾ ಏಕಿ ರಾಜ

ನ ಸಭೆಯಲ್ಲಿ ಪ್ರವೇಶಿಸುವದಕ್ಕೆ ಭಯಪಟ್ಟು ತಾನು ಇಳುಕೊಂಡಿದ್ದ ಮನೆಯಲ್ಲೇ ಬೆಳಗಿನ ಝಾಮದಲ್ಲಿ ಎದ್ದು ಬೆಳಗಾಗುವವರಿಗೂ ಸರಳೆ ಸಾಧಕ ಮಾಡುತ್ತಾ ಇದ್ದನು. ಆಗ ನೆರಮನೆಯಲ್ಲಿದ್ದ ಒಬ್ಬ ಅಗಸಗಿತ್ತಿ ಇವನ ತಪ್ಪು ಕೂಗನ್ನೂ ಅಪಸ್ವರವನ್ನೂ ಕೇಳಿ, ಬಿಕ್ಕಿ ಬಿಕ್ಕಿ ಅಳುತ್ತಾ ಇದ್ದು, ಇವನು ಸುಮ್ಮಗೆ ಆದರೆ ತಾನು ಸುಮ್ಮಗೆ ಆಗುವಳು. ಈ ಮೇರಿಗೆ ನಾಲ್ಕಾರು ದಿನ ತಾನು ಹಾಡುವಾಗ ಕೂಗಿ ಅಳುವ ಮಡಿವಾಳಿಯನ್ನು ಈ ಅಪಸ್ವರದ ವೆಂಗಳಯ್ಯನು ಕೂಗಿ ಕರದು, ಎಲೇ ಅನಿಷ್ಟ್ರ, ದಿನಾ ನಾನು ಸಾಧಕ ಮಾಡೋ ಹೊತ್ತಿನಲ್ಲಿ ನೀನು ಬಿಕ್ಕಿ ಬಿಕ್ಕಿ ಅಳುವದು ಯಾತಕ್ಕೆ? ಹೇಳಸ ಮಾಡುತ್ತಿಯೋ? ಎಂದು ವಿಚಾರಿಸಲು; ಅವಳು ಅಯ್ಯನೋರೇ, ಅದಕ್ಕಲ್ಲ, ನಿಮ್ಮ ಚಿನ್ನದ ಕೊರಳನ್ನು ಕೇಳುವಾಗ ಹೋದ ತಿಂಗಳಲ್ಲಿ ಸತ್ತು ಹೋದ ನನ್ನ ಕತ್ತೇ ಮರಿಯ ನೆನಪು ಬರುತ್ತದೆ, ಆದ್ದರಿಂದ ಅಳುತ್ತೇನೆಂದು ಹೇಳಿದಳು. ಅದ ಕೇಳಿ ನಾಚಿಕೆ ಪಟ್ಟು, ಆ ಅಪಸ್ವರ ಗಾರನು ಈ ಅಗಸಗಿತ್ತಿಯೇ ನನ್ನನ್ನು ಅಪಹಾಸ್ಯ ಮಾಡುವಾಗ, ಈ ಪಟ್ಟಣದ ಅರಸನ ಸಭೆಯಲ್ಲಿ, ನನ್ನ ಹಾಡಿಕೆಯಲ್ಲಿ, ಇದು ಬರೀ ಭ್ರಮೆ ಎಂದು ಹೊರಟು ಹೋದನು. ಹೀಗೆ ಆರವಿದ್ಯಗಾರನು ರಾಜ ಸಭೆಯನ್ನು ಪ್ರವೇಶಿಸ ಕೂಡದು.

---

## 19. THE BLIND MAN AND HIS CHILD.

### ೧೯. ಹುಟ್ಟು ಕುರುಡನೂ ಅವನ ಮಗುವೂ.

ಒಬ್ಬ ಹುಟ್ಟು ಕುರುಡನುಂಟು, ಅವನು ತನ್ನ ತಾಯಿ ತಂದೆಗಳಿಗೆ ಒಬ್ಬನೇ ಮಗನಾಗಿದ್ದನು. ಅವನ ತಂದೆಯು ಸ್ವಲ್ಪ ಐಶ್ವರ್ಯವಂತನಾಗಿದ್ದದ್ದರಿಂದ ಆ ಕುರುಡನ ಮದುವೆಯ ಮೂಲಕ ತನ್ನ ಮನೆಯನ್ನು ಬೆಳಿಸುವ ಉಪಾಯವನ್ನು ಹುಡಿಕಿ, ತನ್ನ ಕುಲದಲ್ಲಿ ಕೇವಲ ಬಡತನದಿಂದ ಕಷ್ಟ ಪಡುವ ಒಬ್ಬನಿಗೆ ಒಬ್ಬಳೇ ಮಗಳು ಇರುವದನ್ನು ವಿಚಾರಿಸಿ, ಮಧ್ಯಸ್ಥ ಮೂಲಕವಾಗಿಯೂ ತಾನೇ ಹೋಕ್ತಾ ಕಂಡು ಮಾತನಾಡಿಯೂ ಹೆಂಣು ನಿಶ್ಚಯ ಪಡಿಸಿ ಕೊಂಡು, ಹೆಂಣು ಹೆತ್ತವರಿಗೆ ಕನ್ಯಾ ಶುಲ್ಕವೆಂಬ ಹೆಣ್ಣಿನ ಓಲೆಗೆ ನೂರಾರು ವರಹಾ ಕಟ್ಟಿ ಕೊಟ್ಟು, ಸರ್ವ ಪ್ರಯತ್ನದಿಂದಲೂ ತನ್ನ ಕುರುಡ ಮಗನಿಗೆ ಮದುವೆ ಮಾಡಿದನು. ಹೀಗೆ ಮದುವೆಯಾದ ಸೊಸೆ ಮನೆಗೆ ಬಂದು, ಒಗತನ ಅಂದರೆ ಸಂಸಾರ ಮಾಡಿ ಕೊಂಡು ಸಂಸಾರಿ ರೀತಿಯಾಗಿ ಕೆಲವು ವರುಷಗಳ ಮೇಲೆ ಬಸುರಾಗಿ ನವಮಾಸ ತುಂಬಿ, ಅಲ್ಪಾಯುಸ್ಸುಳ್ಳ ಗಂಡು ಮಗುವನ್ನು ಹೆತ್ತಳು. ಅದಕ್ಕೆ ಮುಂಚಿತವಾಗಿಯೇ ಕುರುಡನ ತಾಯಿ ತಂದೆಗಳು ಗೋತ ಹಾಕಿದರು. ತರುವಾಯ ಕುರುಡನೇ ಮನೆಗೆ ಯಜಮಾನನಾದನು. ಹೀಗಿರುವಲ್ಲಿ ಒಂದಾನೊಂದು ದಿವಸ ಹೆತ್ತ ತಾಯಿಯೋ, ಮತ್ತೊಬ್ಬಳೋ, ಮಗದೊಬ್ಬಳೋ, ಯಾರೋ, ಆ ಮಗುವಿಗೆ ಹಾಲು ಕುಡಿಸಲು, ಪ್ರೊರೆ ಏರಿ ತೇಲುಗಣ್ಣು ಮೇಲುಗಣ್ಣು ಹಾಕುತ್ತಾ ಅದು ಸತ್ತು ಹೋಯಿತು. ಸಂಗಡಲೇ

ಮನೆಯಲ್ಲಿ ಗೋಳಾಟ ಉಂಟಾಯಿತು. ಅದನ್ನು ಕೇಳಿ ಈ ಕುರುಡನು ದುಃಖ ಪಟ್ಟು, ಮಗುವು ಯಾಕೆ ಸತ್ತು ಹೋಯಿತು ? ಹ್ಯಾಗೆ ಸತ್ತು ಹೋಯಿತು ? ಒಂದು ವರುಷದಿಂದ ಸಾಕಿದ್ದು ವ್ಯರ್ಥವಾಯಿತಲ್ಲಾ, ಮಕ್ಕಳಿಲ್ಲದ ಮನೆ ಮಶಾಣ ಎಂಬ ಹಾಗೆ ಬರೀ ಮನೆ ಆಯಿತು, ಎಂದು ವ್ಯಸನ ಪಡುತ್ತಾ ಇದ್ದನು. ಅವನನ್ನು ಸಮಾಧಾನ ಪಡಿಸುವದಕ್ಕೆ ಮತ್ತೊಬ್ಬ ನೆಂಟನು ಬಂದು ಅಪ್ಪಾ ಯಾಕೆ ಅಳುತ್ತೀ? ಪ್ರಪಂಚದಲ್ಲಿ ಹುಟ್ಟಿದ ಕೆಲವು ಮಕ್ಕಳು ಸಾಯುವದುಂಟು, ನಿನ್ನ ಮಗುವಿನ ಹಾಗೆ ಹಾಲು ಕುಡಿದು ಪ್ರಾಣ ಬಿಟ್ಟದ್ದು ಎಲ್ಲೂ ನೋಡಲಿಲ್ಲ ಅಂದನು. ಅದಕ್ಕಾ ಕುರುಡನು ತನ್ನ ಮಗುವನ್ನು ಕೊಂದು ಹಾಕಿದ ಹಾಲು ಹ್ಯಾಗಿರುವದೆಂದನು ? ನೆಂಟನು ಬಿಳುಪಾಗಿರುವದೆಂದನು. ಕುರುಡನು ಬಿಳುಪು ಹ್ಯಾಗಿರುವದೆಂದನು ? ನೆಂಟನು ಕೊಕ್ಕರೆಯ ಹಾಗಿರುವದೆಂದನು. ಕುರುಡನು ಕೊಕ್ಕರೆ ಹ್ಯಾಗಿರುವದೆಂದನು? ನೆಂಟನು ಇಗೋ ಹೀಗಿರುವದೆಂದು ಕೈಯನ್ನು ಡೊಂಕಾಗಿ ಬಗ್ಗಿಸಿ, ನೋಡೆಂದು ತೋರಿಸಿದನು. ಅದನ್ನು ಸವರಿ ನೋಡಿ ಉದ್ದವಾಗಿ ಡೊಂಕಾಗಿ ಬೊಗ್ಗಿ ಇರುವದನ್ನು ತಿಳಿದು, ಅಯ್ಯೋ ಈ ಡೊಂಕಾದ ದಪ್ಪ ಹಾಲು ಕೂಸಿನ ಗಂಟ್ಲಲ್ಲಿ ಹಿಡಿದೀತೇ? ಇದನ್ನು ಕುಡಿದ ಕೂಸು ಬದಕೀತೇ? ಎಂದು ಬಿಕ್ಕಿ ಬಿಕ್ಕಿ ಅತ್ತು, ಇಂಥಾ ಹಾಲನ್ನು ಕೂಸಿಗೆ ಕುಡಿಸಿದವರ್‍ಯಾರು ? ಅವರಿಗೆ ತಕ್ಕ ಶಿಕ್ಷೆ ಮಾಡಿಸ ಬೇಕು, ಎಂದು ಕೋಪದಿಂದ ಹಾರಾಡುವ ಕುರುಡನ ಎದುರಿಗೆ ಒಬ್ಬರಾದರೂ ಬಾರದೆ ಮನೇ ಹೆಂಗಸರೆಲ್ಲಾ ಎಲ್ಲಿದ್ದವರು ಅಲ್ಲೇ ಇದ್ದು ತಪ್ಪಿಸಿಕೊಂಡರು. ಇದು ಅವಿವೇಕಿಯಾದ ಹುಟ್ಟು ಕುರುಡನ ಕಾರಬಾರು.

---

## 20. THE DISPOSITION OF BEGGARS.

### ೨೦. ಯಾಚಕರ ಗುಣ.

ಅರಸನು ಮಾಡುವ ನಿತ್ಯ ದಾನದಲ್ಲಿ ಗೋದಾನವನ್ನು ಹಿಡಿದ ಒಬ್ಬ ಬ್ರಾಹ್ಮಣನು ಆಕಳನ್ನೂ ಕರುವನ್ನೂ ಹೊಡೆ ಕೊಂಡು ಹೋಗುತ್ತಾ ಇರಲು, ದಾರಿಯಲ್ಲಿ ಎದುರಾಗಿ ಬಂದ ಮತ್ತೊಬ್ಬ ಬ್ರಾಹ್ಮಣನು ಅವನನ್ನು ನೋಡಿ ರಾಯನು ಎಷ್ಟು ಗೋದಾನಾ ಮಾಡಿದನು ? ಎಂದು ಕೇಳಿದನು. ಒಬ್ಬೊಬ್ಬನಿಗೆ ಒಂದೊಂದು ಮೇರಿಗೆ ಸಾವಿರ ಹಸಗಳನ್ನು ಸಾವಿರ ಮಂದಿ ಬ್ರಾಹ್ಮರಿಗೆ ಕೊಟ್ಟನು, ನನಗೆ ಮಾತ್ರ ಎರಡು ಗೋದಾನಾ ಕೊಟ್ಟನು, ಎಂತ ದಾನಾ ಪಡಕೊಂಡವನು ಹೇಳಿದನು. ಎರಡು ಕೊಟ್ಟರೆ ಒಂದೇ ಆಕಳನ್ನು ಹಿಡು ಕೊಂಡು ಹೋಗುತ್ತೀ, ಮತ್ತೊಂದೆಲ್ಲಿ? ಎಂದು ಇನ್ನೊಬ್ಬನು ಕೇಳಲು, ಅಗೋ ನೋಡು, ನನ್ನ ನೆರೆಮನೇ ಶೇಷನು ಆಕಳು ಇಲ್ಲದೆ ಮುಂದೆ ಹೋಗುತ್ತಾನೆ, ಅವನಿಗೆ ಅರಸು ಗೋದಾನಾ ಕೊಡಲಿಲ್ಲ, ಇದು ನನಗೆ ಇಮ್ಮಡಿಯಾಗಲಿಲ್ಲವ್ರೋ ? ಎಂತ ದಾನಾ ಪಡಕೊಂಡವನು ನುಡಿದನು. ಅದಕ್ಕೆ ಇನ್ನೊಬ್ಬ ಬ್ರಾಹ್ಮಣನು ಇದರಿಂದ ನಿನ್ನ ಅಸೂಯಾಗುಣ ಸ್ಪಷ್ಟವಾಯಿತೆಂದನು. ಹೀಗೆ ಹೊಟ್ಟೇಕಿಚ್ಚು ಪಡುವದು ಯಾಚಕರಿಗೆ ಸಹಜ ಗುಣವಾಗಿರುವದು.

## 21. THE MERCHANT AND THE THIEF.

### ೨೧. ಕೋಮಟಿ ಯುಕ್ತಿ.

ಒಬ್ಬ ಕೋಮಟಿಗನು ಸಂತೆಗೆ ತಿರುಗುವ ಸರಾಫನಾಗಿದ್ದನು. ಆ ಚಿನಿವಾರನಲ್ಲಿ ಹಣ ಕಾಸು ಬಹಳವಾಗಿರುವದು ಎಂಬ ಆಶೆಯಿಂದ ಒಬ್ಬ ಕಳ್ಳನು ಅವನ ಸರಾಫ ಚೀಲವನ್ನು ಸಂತೇದಾರಿಯಲ್ಲೇ ಕಸುಕೊಂಡು ಹೋಗ ಬೇಕೆಂದು ಬಹು ದಿವಸದಿಂದ ಹೊಂಚಿ ಕೊಂಡಿದ್ದನು. ಆ ಕೋಮಟಿ ಶೆಟ್ಟಿ ಯುಕ್ತಿಯುಳ್ಳವನಾದ್ದರಿಂದ ಕಳ್ಳನ ಸೋಗೆ ತಿಳಿದು, ಸಂತೇಮಾರ್ಗಗಳಲ್ಲಿ ಒಳ್ಳೇ ಸಹಾಯದಿಂದ ಹೋಗುತ್ತಾ ಬರುತ್ತಾ ಮೋಸ ಹೋಗದೆ ಇದ್ದನು. ಕಳ್ಳನ ದುರಾಶೆ ದಿನ ದಿನಕ್ಕೂ ಹೆಚ್ಚಾಗುತ್ತಾ ಬಂತು. ಅದನ್ನು ತಿಳಿದು ಈ ಕಳ್ಳನಿಗೆ ಪೂರಾ ಕೆಲಸ ಕೊಡ ಬೇಕೆಂದು ಶೆಟ್ಟಿಯು ನೆನಸಿದನು. ಹೀಗಿರುವಾಗ ಒಂದಾನೊಂದು ದಿನ ಈ ಕಳ್ಳನು ಸಂಜೆ ಗತ್ತಲಲ್ಲಿಯೇ ಶೆಟ್ಟಿಯ ಮನೇ ಹೊಕ್ಕು ನಡುಮನೇ ಅಟ್ಟದ ಮೇಲೆ ಹತ್ತಿ ಕೂತು ಹೊಂಚಿ ಕೊಂಡಿದ್ದನು. ಶೆಟ್ಟಿಯು ರಾತ್ರಿ ಭೋಜನವಾದ ಮೇಲೆ ಆ ನಡುಮನೆಯಲ್ಲೇ ಹಾಸಿಗೆ ಹಾಕಿ ಕೊಂಡು ಮಲಗುವ ಸಮಯದಲ್ಲಿ ತನ್ನನ್ನು ಮೋಸ ಮಾಡ ಬೇಕೆಂದು ಬಹು ದಿವಸದಿಂದ ಹೊಂಚಿ ಕೊಂಡಿದ್ದ ಕಳ್ಳನು ತನ್ನ ಮನೆಯ ಅಟ್ಟದ ಮೇಲೆ ಕೂತಿರುವ ಸುಳಿವನ್ನು ಕಂಡು ಇವನನ್ನು ಶಿಕ್ಷಿಸುವದಕ್ಕೆ ಇದೇ ಸಮಯವೆಂದು ನೆನಸಿ ತನಗೆ ಸಮೀಪವಾಗಿ ಮಲಗಿರುವ ಗರ್ಭಿಣಿಯಾದ ಹೆಂಡತಿಯನ್ನು ನೋಡಿ ನಮಗೆ ಈಗಿರುವ ಇಬ್ಬರು ಮಕ್ಕಳಿಗೂ ದೊ

ಡ್ಡ ವೆಂಕಟಪತಿ ಚಿಕ್ಕ ವೆಂಕಟಪತಿ ಎಂದು ಹೆಸರಿಟ್ಟದ್ದೇವಷ್ಟೆ, ಇನ್ನು ಮೇಲೆ ಹುಟ್ಟುವ ಮೂರನೇ ಮಗನಿಗೆ ವೆಂಕಟೇಶ ಎಂದು ಹೆಸರಿಟ್ಟರೆ, ತಾಯಿ ತಂದೆಗಳಾದ ನಾವಿಬ್ಬರೂ ಸಂತೋಷದಿಂದ ದೊಡ್ಡ ವೆಂಕಟಪತಿ, ಚಿಕ್ಕ ವೆಂಕಟಪತಿ, ವೆಂಕಟೇಶ ಎಂದು ಕರಿಯ ಬಹುದು ಎಂದು ಘಟ್ಟಿಯಾಗಿ ಕೂಗಿದನು. ಈ ಮೂರು ಹೆಸರೂ ನೆರೆ ಹೊರೆಯುವರಾದ ತಳವಾರರ ಹೆಸರಾಗಿತ್ತು. ಆ ಮೂರು ಮಂದಿಯೂ ಈ ಶೆಟ್ಟಿಗೆ ಬೇಕಾದವರಾಗಿದ್ದರು. ಆದ್ದರಿಂದ ಅವರು ಆಯುಧಪಾಣಿಗಳಾಗಿ ಬೇಗ ಬಂದು, ಶೆಟ್ಟಿಯ ಜಿರಳಸನ್ನೆಯಿಂದ ಅಟ್ಟದ ಮೇಲಿದ್ದ ಕಳ್ಳನನ್ನು ತಿಳಿದು ಹಿಡಿದು ಎಳದು ಹಿಂಗಟ್ಟು ಕಟ್ಟಿ ಚಾವಡಿಗೆ ತೆಕ್ಕೊಂಡು ಹೋಗಿ, ಲಾಲ ಕಂಭಕ್ಕೆ ಬಿಗಿದರು. ಬೆಳಗಾದ ಮೇಲೆ ಕಳ್ಳನಿಗೆ ಶಿಕ್ಷೆ ಆಗುವದಕ್ಕೆ ಮುಂಚಿತವಾಗಿಯೇ ಶೆಟ್ಟಿಯು ಚಾವಡಿಗೆ ಬಂದು ಲಾಲ ಕಂಭದಲ್ಲಿ ಹಲ್ಲು ಕಿರಿಯುವ ಕಳ್ಳನನ್ನು ನೋಡಿ, ನಿನ್ನ ಆಶೆ ತೀರಿತೋ? ಇನ್ನೂ ತೀರಲಿಲ್ಲವೋ ? ಎಂದು ಕೇಳಿದನು. ಅವನು, ಅಯ್ಯಾ ಶೆಟ್ಟಿ, ನಾನು ಎಂದಿಗೂ ನಿನ್ನ ಗೂಡಿವೆಗೆ ಬರುವದಿಲ್ಲ, ನಿನಗೆ ದಾಸನಾಗಿ ಮನೇ ಕಾಮ ಕೊಂಡಿರುತ್ತೇನೆ, ನನ್ನ ಬಿಡಿಸಿ ಬಿಡು ಎಂದು ಬೇಡಿಕೊಂಡನು. ಅದಕ್ಕೆ ಆ ಶೆಟ್ಟಿಯು ನೀನಾಯಿತು ಅವರಾಯಿತು, ನನಗೇನು ? ಎಂದು ಉತ್ತರಾ ಕೊಟ್ಟು, ತಳವಾರರನ್ನು ಒಡಂಬಡಿಸಿ ಕಳ್ಳನನ್ನು ಬಿಡಿಸಿದನು. ಹೀಗೆ ಯುಕ್ತಿವಂತರಾದ ವರ್ತಕರು ತಮ್ಮನ್ನು ಮೋಸ ಮಾಡ ಬೇಕೆಂಬ ಮೋಸಗಾರರಿಗೆ ತಕ್ಕ ದಂಡನೆಯನ್ನು ಉಪಾಯದಿಂದ ಮಾಡಿಸಿ, ತಾವು ಬಳ್ಳೇಯವರೆಂದು ಘನವನ್ನು ಹೊಂದುವರು. ಯುಕ್ತಿ ಇಲ್ಲದವರು ಪ್ರೋಲಿಶೆಟ್ಟಿಯ ಹಾಗೆ ಕೋಳು ಹೋಗುವರು.

---

## 22. THE BLINDMEN AND THE ELEPHANT.

### ೨೨. ಹುಟ್ಟು ಕುರುಡರೂ ಆನೆಯೂ.

ನಾಲ್ಕು ಮಂದಿ ಹುಟ್ಟು ಕುರುಡರು ಒಂದು ಕಡೆ ಶೇರಿ ಒಬ್ಬರಿಗೊಬ್ಬರು ಮಾತನಾಡಿ ಕೊಂಡದ್ದೇನಂದರೆ, ಆನೆ ಆನೆ ಎಂದು ಜನಗಳು ಹೇಳುತ್ತಾರಲ್ಲಾ, ಅದು ಹ್ಯಾಗಿರುವದು? ಹೀಗಿರುವದೆಂದು ನಾವು ತಿಳಿದುಕೊಳ್ಳುವದು ಹ್ಯಾಗೆ? ಯಾರನ್ನು ಕೇಳಿದಾಗ್ಯೂ ಅವರವರ ಮನಸ್ಸು ಬಂದ ಹಾಗೆ ಹೇಳುತ್ತಾರೆ, ಅದು ನಮಗೆ ಮಂದಟ್ಟು ಆಗುವದಿಲ್ಲ, ನಾವೇ ನಮ್ಮ ಸ್ವಬುದ್ಧಿಯಿಂದ ತಿಳುಕೊಳ್ಳ ಬೇಕೆಂದು ನಿಶ್ಚೈಸಿ, ಅರಸನ ಆನೆಗಳು ನೀರು ಕುಡಿಯುವದಕ್ಕೆ ಬರುವ ಕೆರೇ ಮಾರ್ಗದಲ್ಲಿ ಕೂತುಕೊಂಡಿದ್ದರು. ಆಗ ಒಬ್ಬ ಕಣ್ಣು ಕಾಣುವ ಮುದುಕನು ಮೈ ತೊಳಕೊಳ್ಳುವದಕ್ಕೆ ಕೆರೆಗೆ ಹೋಗುತ್ತಾ, ಅಲ್ಲಿ ಕೂತಿರುವ ಕುರುಡರನ್ನು ನೋಡಿ ನಾಲ್ಕು ಮಂದಿಯೂ ಒಟ್ಟಾಗಿ ಕೂತಿದ್ದೀರಿ, ಏನಾದರು ಕೆಲಸ ಉಂಟೋ? ರವಷ್ಟು ಹೊಗೆಸೊಪ್ಪಿದ್ದರೆ ಕೊಡಿ ಎಂದು ಮಾತಾಡಿಸಿದನು. ಅದಕ್ಕೆ ಅವರು ಕೊಡುತ್ತೇವೆ, ಕೂತುಕೋ, ಯಜಮಾನನಾದ ನಿನ್ನಿಂದ ನಮಗೊಂದು ಕೆಲಸವಾಗ ಬೇಕು, ಅದೇನಂದರೆ, ಈ ದಾರಿಯಲ್ಲಿ ಆನೆ ಬರುತ್ತದಂತೆ, ಅದು ಬರುವಾಗ ನಮಗ ತಿಳಿಸ ಬೇಕೆಂದು ಹೊಗೆಸೊಪ್ಪು ಕೊಟ್ಟು ಪತ್ತರ ಕುಳ್ಳಿರಿಸಿ ಕೊಂಡರು. ತರುವಾಯ ಸ್ವಲ್ಪ ಹೊತ್ತಿಗೆ ಘಣಾ ಘಣಾ ಎಂಬ ಘಂಟೆಗಳ ಸದ್ದಾಯಿತು. ಆಗೋ ಅರಮನೆಯ ಪಳೇ ಮುದಿಯಾನೆ ಬರುತ್ತದೆಂದು ಮುದಕನು ಹೇಳುತ್ತಾ ಇರುವಾಗ, ಅದು ಇವರ ಹತ್ತರಕ್ಕೆ ಬಂತು. ಅದು ಬಹಳ

ಸಾಧುವಾಗಿತ್ತು. ಆಗ ಈ ಕುರುಡರು ಆನೆಯ ಮಾವಟಿಗ ನಿಗೆ ಸಲಾಂ ಮಾಡಿ, ಅಯ್ಯಾ, ಸಾಬರೇ, ನಾವು ಹುಟ್ಟು ಕುರು ಡರು, ನಮ್ಮ ಮೇಲೆ ದಯವಿಟ್ಟು ಈ ಆನೆಯನ್ನು ರವಷ್ಟು ಹೊತ್ತು ನಿಲ್ಲಿಸಿ, ನಾವು ಅದನ್ನು ಮುಟ್ಟಿ ನೋಡಿ ಸಂತೋಷ ಪಡುತ್ತೇವೆ, ನಿನಗೆ ನಾವೇನೂ ಕೊಡಲಾರೆವು, ಎಂದು ಹೇಳಿ ಕೊಂಡರು. ಆಗ ಮಾವಟಿಗನು, ಎಲ ಎಲಾ! ಒಳ್ಳೇ ತ ಮಾಷೆ, ಇವರು ಆನೆಯನ್ನು ಮುಟ್ಟಿ ನೋಡಿ ಏನು ಹೇ ಳುತ್ತಾರೋ ಕೇಳೋಣ ಎಂದು ಆನೆಯನ್ನು ನಿಲ್ಲಿಸಿದನು. ಆಗ ಕುರುಡರು ಎದ್ದು ಬಂದು ಒಬ್ಬನು ಆನೆಯ ಕಾಲನ್ನೂ, ಒ ಬ್ಬನು ಸೊಂಡ್ಲನ್ನೂ, ಮತ್ತೊಬ್ಬನು ಕಿವಿಯನ್ನೂ, ಇನ್ನೊಬ್ಬ ನು ಬಾಲವನ್ನೂ, ಪರಿಸೆಯಾಗಿ ಮುಟ್ಟಿ ನೋಡಿ, ತಿಳೀತು ತಿಳೀ ತು, ಎಂದು, ಕೇಕೆ ಹಾಕಿ ನಕ್ಕರು. ಆಗ ಮಾವಟಿಗನು ನಿಮ ಗೆ ತಿಳಿದ್ದು ಏನೆಂದು ಆ ಮುದುಕನೆದುರಾಗಿಯೇ ಕೇಳಿದನು. ಅ ದಕ್ಕೆ ಆ ಕುರುಡರಲ್ಲಿ ಆನೆಯ ಕಾಲು ಮುಟ್ಟಿ ನೋಡಿದವನು ಆನೆ ಒರಳಿನ ಹಾಗೆ ಇದೆ ಎಂದೂ, ಸೊಂಡ್ಲ ಮುಟ್ಟಿ ನೋಡಿ ದವನು ಆನೆ ಒನಕೆಯ ಹಾಗೆ ಇದೆ ಎಂದೂ, ಕಿವಿಯ ಮುಟ್ಟಿ ನೋಡಿದವನು ಆನೆ ಮೊರದ ಹಾಗೆ ಇದೆ ಎಂದೂ, ಬಾಲವ ಮು ಟ್ಟಿ ನೋಡಿದವನು ಆನೆ ಪೊರಕೆಯ ಹಾಗೆ ಇದೆ ಎಂದೂ, ನಾ ಲ್ಕು ಮಂದಿಯೂ ನಾಲ್ಕು ವಿಧವಾಗಿ ಹೇಳಿದರು. ಒಳ್ಳೇ ತ ಮಾಷೆ ಆಯಿತೆಂದು ಮಾವಟಿಗನು ಆನೆಯನ್ನು ಹೊಡಕೊಂಡು ಹೋದನು. ಮುದುಕನು ನಗುತ್ತಾ ತನ್ನ ದಾರಿ ಹಿಡುಕೊಂ ಡು ಹೋದನು. ಕುರುಡರೆದ್ದು ತಮ್ಮ ತಮ್ಮ ಮನೆಗಳಿಗೆ ಬಂದು ಸೇರಿದರು. ಮಹಾ ಮಹಿಮೆಯುಳ್ಳ ಸರ್ವಶಕ್ತನಾದ

ದೇವರು ಹೀಗಿದ್ದಾನೆ ಹಾಗಿದ್ದಾನೆ ಎಂದು ತಮ್ಮ ತಮ್ಮ ಮತ ಗ್ರಂಥಗಳಲ್ಲಿ ಬೇರೆ ಬೇರೆ ಅರ್ಥಗಳನ್ನು ನಿಶ್ಚೈಸಿ ವಿತಂಡವಾದಗಳನ್ನು ಮಾಡುವ ಜನರೆಲ್ಲರೂ ಈ ಹುಟ್ಟು ಕುರುಡರಿಗೆ ಸಮಾನರಾಗಿ ತೋರುತ್ತಾರೆಂಬುವದೇ ಈ ಕಥೆಯ ಮುಖ್ಯಾಭಿಪ್ರಾಯ.

---

## 23. THE MANEGAR AND THE WATCHMAN.

### ೨೩. ಮಣೇಗಾರನೂ ತಳವಾರನೂ.

ಹೊಸಕೋಟೆ ಕೆರೆಯು ಹಾಗೆ ಒಂದು ದೊಡ್ಡ ಕೆರೆ ಇರುವದು. ಆ ಕೆರೇ ಕೆಳಗೆ ಪೈರು ಪಚ್ಚೆ ಮುಂತಾದ ಸಾಗುವಳೀ ಕೆಲಸವನ್ನು ನೋಡುವದಕ್ಕೆ ಸರಕಾರದಿಂದ ನೇಮಿಸಲ್ಪಟ್ಟ ಒಬ್ಬ ಮಣೇಗಾರನಿದ್ದನು. ಇವನಿಗೆ ಶೇಕದಾರನು, ಸಾಗುವಳಿದಾರನು, ಪೈರುದಾರನು, ಎಂಬ ಹೆಸರುಂಟು. ಈ ಮಣೇಗಾರನ ತಾಬೆಯಲ್ಲಿ ತೈನಾತಿ ಜವಾನರು, ಕುಳವಾಡಿಗಳು, ತಳವಾರರು, ನೀರು ಗಂಟಿಗಳು, ಮುಂತಾದ ಸರಕಾರದ ಇಲಾಖೆ ಚಾಕರರು ಉಂಟು. ಅವರಿಗೆ ಸಂಬಳ, ಮಾನ್ಯ, ಮ್ಯಾರೆ, ಕಟ್ಟುಹೊರೆ, ಬೆಲ್ಲ, ಬತ್ತ, ಆಡೆರಾಶಿ, ಈ ಮುಂತಾದ ಜೀವನಗಳು ನಡಿಯುವವು. ಇವರಿಗೆಲ್ಲಾ ಎಜಮಾನನಾದ ಮಣೇಗಾರನು ಒಂದು ದಿವಸ ಒಬ್ಬ ತಳವಾರನನ್ನು ಕರದು, ಮನೆಯಲ್ಲಿ ಹುಡುಗರು ನಸೆಅಕ್ಕಿ ಮಾಡಿ ತಿನ್ನ ಬೇಕೆಂದು ಆಶೆ ಪಡುತ್ತಾರೆ, ನೀನು ಕಾಯಿ ಬಗ್ಗಿರುವ ಗದ್ದೆಗೆ ಹೋಗಿ ಅಲ್ಲಲ್ಲಿ ಒಂ

ದೊಂದು ಹಿಡಿ ನೆಲ್ಲು ತರಚಿ ಎರಡು ಪಡಿ ನೆಲ್ಲು ತೆಕ್ಕೊಂಡು ಬಾ ಎಂದನು. ಆಗ ತಳವಾರನು, ಸ್ವಾಮಿ, ಬುದ್ಧಿ, ದ್ಯಾವರು, ಒಳ್ಳೇದೆಂದು ಸಾಯಂಕಾಲವಾಗೋದೂ ಗದ್ದೆಗೆ ಹೋಗಿ, ನಾಲ್ಕು ಗದ್ದೆಗಳಲ್ಲಿ ನಾಲ್ಕು ಪಡಿ ನೆಲ್ಲು ತರಚಿ ಎರಡು ಪಡಿ ಮಣೇಗಾರನ ಮನೆಗೆ ಕೊಟ್ಟು, ಎರಡು ಪಡಿ ತನ್ನ ಮನೆಗೆ ತೆಕ್ಕೊಂಡು ಹೋದನು. "ಬರೀ ಬಾಯಿ ಆಡಿಸುವವನಿಗೆ ಗುಗ್ಗರಿ ಉಂಟಾದರೆ ಸುಮ್ಮನಿರುವನೋ" ಎಂಬ ಸಾಮತಿಗೆ ಸರಿಯಾಗಿ, ಅದು ಮೊದಲುಗೊಂಡು ಆ ಕಳ್ಳ ತಳವಾರನು ದಿನಾಲು ಒಂದೊಂದು ಗದ್ದೇ ಮಡಿಗೆ ಒಂದೊಂದು ಹಿಡಿ ಮೇರಿಗೆ ನೆಲ್ಲು ತರಚಿ ಕೊಂಡು, ಒಕ್ಕಳವೋ ಇಕ್ಕಳವೋ ಆದ ನೆಲ್ಲನ್ನು ತನ್ನ ಮನೆಗೆ ತೆಕ್ಕೊಂಡು ಹೋಗುತ್ತಾ, ನೆಲ್ಲು ಕಾಯಿ ಬಗ್ಗಿದ್ದು ಮೊದಲುಗೊಂಡು ಕೊಯಿಲಿಗೆ ಬರುವ ವರಿಗೂ ಬೋನ ಉಂಡದ್ದಲ್ಲದೆ ಮೂರು ನಾಲ್ಕು ಖಂಡಗ ನೆಲ್ಲು ಕಣಜಕ್ಕೆ ತುಂಬಿದನು. ಹೀಗಿರುವಲ್ಲಿ ಗದ್ದೆ ಕೊಯಿಲು ಹಿಡಿಯುವದಕ್ಕೆ ಮೊದಲನೇ ದಿನ ನಿಲುವಿನ ಮೇಲೆ ಗದ್ದೆಯಲ್ಲಿ ಏನಾದರು ಕಳ್ಳವರಿಕೆ ಆಗಿರುವದೋ ಎಂದು ವಿಚಾರಿಸುವದಕ್ಕೆ ಮಣೇಗಾರನು ಹೊರಟು, ರಾಜ ಕಾಲಿವೆಯಿಂದ ಚಿಲ್ಲರೆ ಕಾಲಿವೆಗಳ ಮೇಲೂ ಬರುಬುಗಳ ಮೇಲೂ ತಿರಿಗಿ ತಿರಿಗಿ ನೋಡಿ ಗದ್ದೆಗದ್ದೆಗೂ ನೆಲ್ಲು ತರಚಿರುವ ಬರೀ ಹುಲ್ಲನ್ನು ಕಂಡನು. ಆಗ ಹಿಂದೆ ಬರುತ್ತಿರುವ ನಂಬಿಕೆ ತಳವಾರನನ್ನು ನೋಡಿ, ಎಲಾ ಇದೇನು? ಗದ್ದೆಗಳಲ್ಲಿ ಎಲ್ಲಿ ನೋಡಿದರೂ ಬರಲು ಬರಲಾಗಿದೆ ? ಯಾರು ತರಚಿಕೊಂಡು ಹೋದರು? ನೀನೆಲ್ಲಿರುತ್ತೀ? ನಿನ್ನ ಕಾವಲು ಹೀಗೇನೋ? ಎಂದು ಘಟ್ಟಿಯಾಗಿ ಕೇಳಲು, ಈ ತಳವಾರನು ಭ

ಯವಿಲ್ಲದೆ ಸಮೀಪಕ್ಕೆ ಬಂದು ರಹಸ್ಯವಾಗಿ ಸ್ವಾಮೀ, ಬುದ್ಧಿ, ತಮ್ಮ ಅಪ್ಪಣೆ ಪ್ರಕಾರ ನಾನು ನೆಲ್ಲು ತರಚಿ ತಮ್ಮ ಮನೆಗೆ ತಂದು ಕೊಟ್ಟದ್ದಲ್ಲದೆ ಮಿಕ್ಕಾದ ಸಮಾಚಾರವನ್ನು ನಾನರಿಯೆನೆಂದನು. ಆ ಮಾತನ್ನು ಕೇಳಿ ಈ ಮಣೇಗಾರನು ವಿಚಾರಣೆ ಬಲ ಮಾಡಿದರೆ ತನ್ನ ತಲೆಗೆ ಬರುತ್ತದೆಂದು ಸುಮ್ಮನಾದನು. ಹೀಗಿದ್ದಾಗ್ಯೂ ಜನಗಳು ಗುಣಗುಟ್ಟುತ್ತಾ ಗುಣಗುಟ್ಟುತ್ತಾ ಸರಕಾರದ ಹುದ್ದೇದಾರನಿಗೆ ತಿಳಿದು, ಅವನು ಆ ಮಣೇಗಾರನನ್ನು ಬರತರಫು ಮಾಡಿಸಿದನು. ಆದ್ದರಿಂದ ಸ್ವಲ್ಪ ಕಾರ್ಯಗಳನ್ನು ಕೀಳು ಮನುಷ್ಯರಿಗೆ ತಿಳಿಯ ಪಡಿಸುವದು ಅಧಿಕಾರಿಗಳಿಗೆ ತಕ್ಕ ಕೆಲಸವಲ್ಲ. ಅದರಿಂದ ಬಹಳ ತೊಂದರೆಗಳು ಸಂಭವಿಸಿ ಕೆಲಸಗಳೆಲ್ಲಾ ಕೆಟ್ಟು ಹೋಗುವವು.

---

## 24. THE POTTER AND THE PEON.

### ೨೪. ಕುಂಬಾರನೂ ಓಲೇಕಾರನೂ.

ಒಂದು ಊರಿನಲ್ಲಿ ಒಬ್ಬ ಕುಂಬಾರನು ಮಡಕೆಗಳ ಮಾಡಿ ಮಾರಿ ಜೀವನ ಮಾಡುತ್ತಿರುವನು. ಅರಮನೆಯ ಓಲೇಕಾರರು ಅವನು ಆವಿಗೆ ತೆಗಿಯುವ ಹೊತ್ತಿಗೆ ಬಂದು, ಅರಮನೆಗೆ ಬಿಟ್ಟಿ ಮಡಕೆಗಳು ಬೇಕೆಂದು ತಗಾದಿ ಹಚ್ಚಿ, ಬಹಳವಾಗಿ ರೊಷ್ಟು ಮಾಡಿ ತೊಂದರೆ ಪಡಿಸಿ, ಒಂದು ಕಾಸು ವೀಸವಾದರೂ ಬೆಲೆ ಕೊಡದೆ, ಪುಕ್ಕಟೆಯಾಗಿ ಆವಿಗೆ ಮಡಿಕೆಗಳೆಲ್ಲಾ ಸಿಕ್ಕಿದವರು ಸಿಕ್ಕಿದ ಹಾಗೆಯೇ ಹೊತ್ತುಕೊಂಡು ಹೋಗುವರು. ಹೀ

ಗಿರುವಲ್ಲಿ ಅರಮನೇ ಹೀಕಲಾಟಕ್ಕೆ ಭಯ ಪಟ್ಟು ತಪ್ಪಿಸಿ ಕೊಳ್ಳಬೇಕೆಂದು ಕುಂಬಾರನು ಒಂದು ದಿವಸ ಸುಟ್ಟ ಆವಿಗೆಯನ್ನು ತೆಗಿಯದೆ ಮನೇ ಬಾಗಲು ಮುಚ್ಚಿ ಬಿರೀ ಕಟ್ಟಿ ಬಿಟ್ಟು ಊರು ಮುಂದಕ್ಕೆ ಹೊರಟು ಹೋದನು. ಆಗ ಓಲೇಕಾರರು ಈ ಹೊತ್ತು ಕುಂಬಾರನು ಆವಿಗೆ ತೆಗದಿದ್ದಾನು, ಮಡಕೆಗಳೆಲ್ಲಾ ಬಾಚಿಕೊಂಡು ಬರೋಣ, ಎಂದು ಅವನ ಮನೆಗೆ ಬಂದು ಅವನಿಲ್ಲದೆ ಮನೇ ಬಾಗಲು ಬಿರೀ ಕಟ್ಟಿರುವದನ್ನು ನೋಡಿ ತಾವು ಬಂದ ಕೆಲಸ ಆಗಲಿಲ್ಲವಲ್ಲಾ ಎಂದು ಸುಮ್ಮನೆ ಹೋದರು. ಈ ಕುಂಬಾರನು ಓಲೇಕಾರರು ಹೋಗುವ ದಾರಿಯಲ್ಲಿರುವ ತಾಳೇ ಅಡವಿಯಲ್ಲಿ ಹೊಕ್ಕೊಂಡಿದ್ದು, ಅವರು ತನ್ನ ಸಮೀಪಕ್ಕೆ ಬರುವಾಗಲೇ ಮನೆಗೆ ಹೋಗ ಬೇಕೆಂದು ಹೊರಟು ಬರುತ್ತಾ, ಅವರನ್ನು ಕಂಡು ತನ್ನನ್ನು ಅವರು ಗುರುತು ಹಿಡಿದಾರೆಂದು ಅಂಜಿ, ಹಿಂದು ಮುಂದು ತೋರದೆ ಒಂದು ತಾಳೇ ಮರದ ಹತ್ರ ನಿಂತುಕೊಂಡು ಮರವನ್ನು ಮೇಲಕ್ಕೂ ಕೆಳಕ್ಕೂ ನೋಡುತ್ತಾ ಇದ್ದನು. ಹೀಗೆ ಬೆಪ್ಪಾಗಿ ಮರವನ್ನು ನೋಡುವವನ ಕಂಡು ಓಲೇಕಾರರು ಎಲಾ, ಯಾತಕ್ಕೆ ಹಾಗೆ ನೋಡುತ್ತೀ? ಅನ್ನಲು, ಅವನು ಮತ್ತೆ ಯಾತಕ್ಕೂ ಅಲ್ಲ, ನೇಗಲಿಗೆ ಆದೀತೋ ಎಂದು ನೋಡುತ್ತೇನೆ ಅನ್ನಲು, ಅವರು ನೀನೇನು ಕುರುಬನೋ ಕುಂಬಾರನೋ? ತಾಳೇ ಮರವನ್ನು ಕಡದು ನೇಗಲು ಮಾಡುತ್ತೀಯೋ? ಇದು „ಗೋಣಿ ಮರವನ್ನು ಜಾಣನಾದರೆ ತೂನಿ ಕೋಲು ಮಾಡುವನು" ಎಂಬ ಸಾಮತಿ ಆಯಿತು, ಅಂದರು. ಆ ಮಾತು ಕೇಳಿ ಇವನಿಗೆ ಕೋಪ ಬಂದು ನಾನು ಕುರುಬನೋ? ಒಂದು ಜಾತಿಯಲ್ಲಿ ಹುಟ್ಟಿ ಮತ್ತೊಂದು ಜಾತಿ

ಯ ಹೆಸರು ಹೇಳ ಬಹುದೋ? ನಾನು ಕುಂಬಾರನೇ ಸರಿ, ತಾ
ಳೇ ಅಡವಿಯಲ್ಲಿ ಹೊಕ್ಕೊಂಡಿದಾಗ್ಯೂ ನನ್ನ ಗುರುತು ನಿಮಗೆ
ತೋರಿಸಿದವರ್ಯ್ಯಾರು? ಅವರ ಗ್ರಹಚಾರ ಬಿಡಿಸಿ ಬಿಡುತ್ತೇನೆ,
ಎಂದು ಗದರಿದನು. ಆಗ ಓಲೇಕಾರರು ಅಯ್ಯಾ ಶೆಟ್ಟಿ, ಯಾ
ಕೆ ಗದರುತ್ತೀ? ನಾವು ಹುಡುಕುವ ಕುಂಬಾರನು ನೀನೇನೋ?
ಒಳ್ಳೇ ಕೆಲಸ, ನಿನ್ನ ಗುರುತು ನೀನೇ ತೋರಿಸಿದಿ ಹೊರ್ತು
ಮತ್ತೊಬ್ಬರೂ ತೋರಿಸಲಿಲ್ಲ. ಯಾರ ಮೇಲೆ ಕೋಪ ಮಾ
ಡುತ್ತೀ? ನಡಿ ನಡಿ, ಶ್ಯಾನೆ ಹೊತ್ತಾಯಿತು, ಸರಕಾರದ ಕೆಲಸ
ಬಹು ಜರೂರಾಗಿದೆ, ನೀನು ಕುಂಬಾರ ಶೆಟ್ಟಿಯಾಗಿ ಅರಮನೇ
ಸರಬರಾಯಿ ಮಾಡದೆ ಅಡವಿಯಲ್ಲಿ ಬಂದು ಹೊಕ್ಕೊಂಡು ಆ
ವಿಗೆ ಮಡಿಕೆಗಳೆಲ್ಲಾ ಮಾರಿಕೊಂಡು ಬುಡಿಗೆ ತುಂಬಿಸ ಬೇಕೆಂ
ದು ಎಣಿಸಿಕೊಂಡೆಯೋ? ಘಟ್ಟಿಗನೇ ಸರಿ, ನಿನ್ನ ಘಟ್ಟಿತನಾ
ನೋಡಿ ಸರಕಾರದವರು ಬಿಟ್ಟು ಬಿಟ್ಟಾರೋ? ಈ ಹೊತ್ತಾಯಿ
ತು ನಾಳೆ ಆಯಿತು ಹೀಗೆ ಮಾಡಿದರೆ, ಕೆಲಸ ಕೆಟ್ಟು ಹೋಗು
ವದು, ನಿನ್ನನ್ನು ಈಗಲೇ ಕಚೇರಿಗೆ ಹಿಡುಕೊಂಡು ಹೋಗಿ
ಭಾರಿ ಜುಲ್ಮಾನೆ ತೆರಿಸ ಬಹುದು, ಆದರೂ ನೀನು ನಮಗೆ ಬೇ
ಕಾದವನಾದ್ದರಿಂದ ಈ ತಪ್ಪು ಮನ್ನಿಸಿದ್ದೇವೆ, ಎಂದು ಬಹುತರ
ವಾಗಿ ಬೆದರಿಸಿದರು. ಆಗ ಆ ಕುಂಬಾರನು ಕುರಿಯ ಹಾಗೆ ತಲೆ
ಬಗ್ಗಿಸಿಕೊಂಡು ಒಳ್ಳೇ ಪೀಕಲಾಟ ಬಂತು, "ರಾಮೇಶ್ವರಕ್ಕೆ
ಹೋದರೂ ಶನೇಶ್ವರ ಬಿಡದು" ಎಂದು ತನ್ನಲ್ಲಿ ತಾನೇ ಅಂದು
ಕೊಂಡು, ಅವರ ಹಿಂದೆ ಮನೆಗೆ ಬಂದು, ಆವಿಗೆ ತೆಗದು ಬಂದು
ಚಿಕ್ಕದ ತುಂಬಾ ಮಡಕೆಗಳನ್ನು ಪೇರಿಸಿ ಕಟ್ಟಿ ಕೊಟ್ಟನು. ಮ
ತ್ತೊಬ್ಬ ಬೇಗಾರಿ ಆಳು ಸಿಕ್ಕದ್ದರಿಂದ ಓಲೇಕಾರರು ಮಡಕೆಗ

ಳ ಚಿಕ್ಕವನ್ನು ಕುಂಬಾರನ ತಲೇ ಮೇಲೆಯೇ ಹೊರಿಸಿ ಕೊಂಡು ಹೋದರು. ಈ ಪ್ರಕಾರ ಆಕಾಶಕ್ಕೂ ಭೂಮಿಗೂ ಅರಮನೇ ತಗಾದೆಗೂ ತಪ್ಪಿಸಿ ಕೊಳ್ಳಬೇಕೆಂದು ತಿಳಿಯದ ಮೂಢರು ಆಲೋಚನೆ ಮಾಡುತ್ತಾರೆ. ಅವ್ರುಗಳನ್ನು ತಪ್ಪಿಸಿಕೊಳ್ಳ ಬೇಕಾದರೆ ಸತ್ತು ಕೆತ್ತು ಅಲ್ಲದೆ ಬೇರೆ ಉಪಾಯವಿಲ್ಲ. ಅದು ಹ್ಯಾಗಂದರೆ, ಆ ಕಾಶಕ್ಕೂ ಭೂಮಿಗೂ ಸತ್ತೇ ತಪ್ಪಿಸಿ ಕೊಳ್ಳ ಬೇಕು, ಅರಮನೇ ತಗಾದೆಗೆ ಕೆತ್ತೇ ತಪ್ಪಿಸಿ ಕೊಳ್ಳ ಬೇಕು, ತೆರುವದಕ್ಕೆ ಗತಿ ಇಲ್ಲದಿದ್ದರೆ ಸತ್ತು ತೀರಿಸುವದೇ ಉಪಾಯ. ಇದು ತಿಳಿದು ಬುದ್ಧಿವಂತನು ಅರಮನೇ ತಂಟೆಗೆ ಶಿಕ್ಕ ಬಾರದು.

---

## 25. THE TAMILMAN AND MUSSALMAN.

### ೨೫. ತಿಗಳನೂ ತುರಕನೂ.

ದೇಶದಿಂದ ದೇಶಕ್ಕೆ ಹೋಗುವ ವ್ಯಾಪಾರಸ್ಥನಾದ ಒಬ್ಬ ತಿಗಳನು ಕಾಯಪುಷ್ಟಿಯೂ ಬಲವೂ ಉಳ್ಳವನಾಗಿದ್ದನು. ಅದಕ್ಕೆ ತಕ್ಕ ಧೈರ್ಯವೂ ಉಪಾಯವೂ ಅವನಿಗಿರುವದು. ಅವನಿಗೆ ಬಡಕೋಲಾಗಿ ಕೈ ಕಾಲುಗಳಲ್ಲಿ ಆಯಿಬಿಲ್ಲದೆ ಬಲ ಉಂಟಾದ್ದೊಂದು ಕಡವ ಕುದುರೆ ನಿಂಮರಾಸಾಗಿರುವದು. ಆ ಕುದುರೇ ಮೇಲೆ ಸಾಮಾನು ಹಾಕಿ ಹತ್ತಿ ಕೊಂಡು ದಾರಿಯಲ್ಲಿ ಬರುತ್ತಾ ಬರುತ್ತಾ ರಘಾಮ ಹೊತ್ತಿಗೆ ಒಂದು ನೀರಿನ ಕಾಲವೆಯ ಹತ್ರಕ್ಕೆ ಬಂದು, ಅಲ್ಲಿ ಕುದುರೆಯ ಇಳಿದು ಚಿಕ್ಕ ಮರಕ್ಕೆ ಬಾಗ

ಡೋರು ಹಗ್ಗದಿಂದ ಕಟ್ಟಿಹಾಕಿ ತಾನು ಮುಖ ತೊಳಕೊಂಡು ತಂಗಳು ತಿನ್ನುತ್ತಾ ಇದ್ದನು. ಅಷ್ಟರಲ್ಲೇ ಅತ್ತಕಡೆಯಿಂದ ಒಬ್ಬ ತುರುಕನು ಒಂದು ಕುದುರೆಯ ಮೇಲೆ ಹತ್ತಿ ಕೊಂಡು ಬಂದು ಈ ತಿಗಳನ ಹತ್ರವೇ ಇಳಿದು ತನ್ನ ಕುದುರೆಯನ್ನು ಅದೇ ಮರಕ್ಕೆ ಕಟ್ಟಿ ಹಾಕುವದಕ್ಕೆ ಬಂದನು. ತಿಗಳನು ಅದನ್ನು ನೋಡಿ, ಅಯ್ಯಾ ಸಾಬರೇ, ನಿನ್ನ ಕುದುರೆಯನ್ನು ಬೇರೆ ಮರಕ್ಕೆ ಕಟ್ಟು, ನನ್ನ ಕುದುರೆಯ ಹತ್ರಕ್ಕೆ ತರಬೇಡ, ಈ ಮರಕ್ಕೆ ಕಟ್ಟಬೇಡ, ಇದು ಗಂಡು, ಅದೂ ಗಂಡು, ಒಂದಕ್ಕೊಂದು ಕಚ್ಚಾಡಿ ಸತ್ತು ಹೋದಾವು, ಇದರ ಮೇಲೆ ನನ್ನ ಕುದುರೆ ಕೆಟ್ಟ ಕುದುರೆ, ನೋಡಿಕೋ, ಹೇಳಿದ್ದೇನೆ, ಎಂದು ಎಷ್ಟು ಬಗೆಯಿಂದ ಹೇಳಿದಾಗ್ಯೂ, ಈ ಮೂರ್ಖನಾದ ತುರುಕನು ನಾನು ಕಟ್ಟುವದೇ ಸರಿ, ನಿನ್ನಿಂದಲೂ ನಿನ್ನ ಕುದುರೆಯಿಂದಲೂ ಏನಾಗುತ್ತೆ ? ನಾನೂ ನನ್ನ ಕುದುರೆಯೂ ಕೈಲಾಗದವರೆಂದು ತಿಳಕೊಂಡಿಯೋ ? ಎಂದು ಒರಟು ಮಾತುಗಳಾಡುತ್ತಾ ಗರ್ವದಿಂದ ಕುದುರೆಯನ್ನು ಅದೇ ಮರಕ್ಕೆ ಕಟ್ಟಿ ಹಾಕಿದನು. ಕೂಡ್ಲೇ ಈ ಎರಡು ಕುದುರೆಗಳೂ ಒಂದಕ್ಕೊಂದು ಮುಖಗಳನ್ನು ಮೂಸಿ ನೋಡಿ ಕೊಂಡು ರೋಷದಿಂದ ಕೆನೆಯುತ್ತಾ ಕಾಲು ಕೆದರಿ ಕಚ್ಚಾಡುವದಲ್ಲದೆ, ಹಿಂತಿರಿಗಿ ಝಾಡಿಸಿ ಒದೆಯುವದಕ್ಕೆ ಆರಂಭಿಸಲು, ಕಟ್ಟಿದ್ದ ಹಗ್ಗಗಳು ತುಂಡು ತುಂಡಾಗಿ ಕಿತ್ತು ಹೋಯಿತು. ತಿಗಳನ ಕುದುರೆ ದೇಶದ್ದು, ತುರುಕನ ಕುದುರೆ ಕೋಲಾರಿ, ಆದ್ದರಿಂದ ದೇಶದ ಕುದುರೆಗೆ ಬಲವೂ ರೋಷವೂ ಹೆಚ್ಚಿ ಅದು ತುರುಕನ ಕುದುರೆಯನ್ನು ಬಿದ್ದು ಕೆಡವಿ ಕಚ್ಚಿ ಕೊಂದು ಹಾಕಿತು. ಆಗ ತುರುಕನು ಕೋ

ಪದಿಂದ ತಿನ್ನುವ ರೊಟ್ಟಿಯನ್ನು ಬಿಟ್ಟು ಎದ್ದು ಬಂದು ತಿಗಳನ ಮೇಲೆ ಬೀಳಲು, ಇಬ್ಬರಿಗೂ ಕೈ ಗುದ್ದಾಟವಾಗಿ ಬಲಉಳ್ಳ ತಿಗಳನು ಬಾಯಿ ಬಡುಕ ತುರುಕನನ್ನು ಹಿಡಿದು ರಕ್ತ ಕಾಣುವ ಹಾಗೆ ಚನ್ನಾಗಿ ಚಚ್ಚಿದನು. ಹೀಗೆ ಕುದುರೆಯ ಹೋಗಲಾಡಿಸಿ ಕೊಂಡು ಮೈ ಮುರಿಯ ಪೆಟ್ಟು ತಿಂದು ಆದಾಗ್ಯೂ ಬಿಡದೆ ಎದುರಾಳಿಯ ನಡುಕಟ್ಟಿಗೆ ಕೈ ಹಾಕಿ ಎಳ ಕೊಂಡು ಠಾಣಾ ಚಾವಡಿಗೆ ಬಂದು ತುರುಕನು ತಿಗಳನ ಮೇಲೆ ಫಿರ್ಯಾದು ಹೇಳಿದನು. ಅಲ್ಲಿನ ವಿಚಾರಣೆ ಕರ್ತನು ತಿಗಳನನ್ನು ನೋಡಿ ನಿನ್ನ ಮಾತೇನೆಂದು ಕೇಳಲು, ಅವನು ಪ್ರತ್ಯುತ್ತರ ಕೊಡದೆ ಸುಮ್ಮನೆ ಇದ್ದನು. ಇವನೇನು ಮೂಗನೋ ? ಎಂದು ವಿಚಾರಣೆ ಕರ್ತನು ಕೇಳಲು, ತುರುಕನು ಇವನು ಮೂಗನಲ್ಲ, ತನ್ನ ಕುದುರೆಯ ಕಟ್ಟಿರುವ ಮರಕ್ಕೆ ನನ್ನ ಕುದುರೆಯ ಕಟ್ಟ ಬೇಡವೆಂದು ತಾನು ಹೇಳಿದ ಪ್ರಕಾರ ನಾನು ಮಾಡದ್ದರಿಂದ ತನ್ನ ಕುದುರೆಯಿಂದ ನನ್ನ ಕುದುರೆಯನ್ನು ಕೊಂದು ಹಾಕಿಸಿದನು, ಹೀಗೆ ಮಾಡಿದಿಯಾ ಎಂದು ಅವನ ಮೇಲೆ ಬಿದ್ದು ಹೊಡಿಯುವದಕ್ಕೆ ಹೋದ ನನ್ನನ್ನು ತಾನೇ ಹೊಡದಿದ್ದಾನೆ, ಎಂತ ಹೇಳಲು, ಆ ಮಾತನ್ನು ಕೇಳಿ, ನ್ಯಾಯಗಾರನು ಅಯ್ಯೋ! ಹುಚ್ಚು ತುರುಕನೇ, ನಿನ್ನ ಕುದುರೆಯನ್ನು ನೀನೇ ಕೊಂದು ಹಾಕಿಸಿ ಕೊಂಡಿ, ನೀನು ಅವನನ್ನು ಹಿಡಿದು ಹೊಡಿಯುವದಕ್ಕೆ ಹೋದಾಗ ಅವನು ನಿನ್ನ ಹೊಡದನು, ಇದಕ್ಕೆ ಬೇರೆ ಸಾಕ್ಷಿ ಅಗತ್ಯವಿಲ್ಲ, ದುಃಖ ಪಡ ಬೇಡ, ಮನೆಗೆ ಹೋಗು, ಎಂದು ಕಳುಹಿಸಿ ಬಿಟ್ಟನು. ಈ ಪ್ರಕಾರ ಮೂರ್ಖರು ನಷ್ಟವನ್ನೂ ಅವಮಾನವನ್ನೂ ಹೊಂದುವರು.

## 26 THE ROBBER'S SCHEME.

### ೨೬. ಕಳ್ಳನ ಉಪಾಯ.

ಒಂದು ಊರಿನಲ್ಲಿ ಒಬ್ಬನು ಒಂದು ಮೇಕೆಯನ್ನು ಚೆನ್ನಾಗಿ ಮೇಯಿಸಿ ಕೊಬ್ಬಾಗಿ ಸಾಕಿದನು. ಅದನ್ನು ಕದ್ದು ತಿನ್ನ ಬೇಕೆಂದು ಆ ಊರು ತಳವಾರನು ಹೊಂಚಿ ಕೊಂಡಿದ್ದು, ಹೊಲದಲ್ಲೋ ತೋಟದಲ್ಲೋ ಒಂಟಿಯಾಗಿ ಮೇಯುತ್ತಿದ್ದ ಮೇಕೆಯನ್ನು ವಿಮಾರಿಸಿ ಹಿಡುಕೊಂಡು ಹೋಗಿ ತಕ್ಷಣದಲ್ಲೇ ಕೊಂದು ಬಚ್ಚಿಟ್ಟು, ಅದೇ ರಾತ್ರಿಯಲ್ಲಿ ಕೊಯಿದು ಬೇಯಿಸುವದಕ್ಕೆ ರಹಸ್ಯವಾಗಿ ತನ್ನ ಹೆಂಡತಿಗೆ ಹೇಳಿದನು. ಅವಳು ಅದೇ ಪ್ರಕಾರ ಒಬ್ಬರಿಗೂ ತಿಳಿಯದ ಹಾಗೆ ನಿಶಿರಾತ್ರಿಯಲ್ಲಿ ಬೇಯಿಸಿದ ಮೇಕೆಯ ಮಾಂಸವನ್ನು ಗಂಡನಿಗೆ ತಿನ್ನಲಿಕ್ಕೆ ಇಕ್ಕಿದಳು. ಆ ಸಮಯದಲ್ಲಿ ತಮಗಿದ್ದ ಒಬ್ಬ ಮಗನನ್ನು ಬಿಟ್ಟು ತಾವೇ ತಿನ್ನಬಾರದೆಂಬ ನೆನಪು ಹುಟ್ಟಿ, ಅಂಗಳದಲ್ಲಿ ಮಲಗಿ ನಿದ್ದೆ ಹೋಗುವ ಹುಡುಗನನ್ನು ಎಬ್ಬಿಸಿ ಕರಕೊಂಡು ಬಾ ಎಂದು ಗಂಡನು ಹೇಳಲು, ಹೆಂಡತಿಯು ಈಗಲೇ ಅವನನ್ನು ಎಬ್ಬಿಸಿದರೆ ಅವನು ಏಳುತ್ತಾನೋ ಇಲ್ಲವೋ ? ಘಟ್ಟಿಯಾಗಿ ಕೂಗಿ ತಟ್ಟಿ ಎಬ್ಬಿಸಿದರೆ ನೆರೆ ಹೊರೆಯವರು ಇಷ್ಟು ಹೊತ್ತಿನಲ್ಲಿ ಇವರ ಮನೆಯಲ್ಲಿ ಏನೋ ಓಡ್ಯಾಟವೆಂದು ಬಂದರೆ ಬಹಳ ತೊಂದರೆ ಉಂಟಾಗುವದು, ಅಂದಳು. ತಳವಾರನು ಹಾಗಾದರೆ ನಾವಿಬ್ಬರೂ ಬೇಕಾದಷ್ಟು ತಿಂದು ಮಿಕ್ಕದ್ದನ್ನು ಮಡಿಕೆ ಬೇರಿಸಿ ನೆಲ ಮರೆ ಮಾಡಿ ಬಚ್ಚಿಟ್ಟಿದ್ದು ಹೊತಾರೆಗಾದರು ಹುಡುಗನಿಗೆ ಕೊಡ ಬಹುದು ಅಂದನು. ಅದಕ್ಕವಳು

ಹಾಗೆ ಕೊಡದು, ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನು ಮಂಚಿಸ ಬಹುದೋ? ಒಬ್ಬರಿಗೆ ತಿಳಿಯದ ಹಾಗೆ ಎಬ್ಬಿಸುವ ಉಪಾಯವನ್ನು ಹುಡುಕಿ ಹೇಳೆಂದಳು. ಅವನು ಒಂದು ಚೊಂಬಿನಲ್ಲಿ ನೀರು ತೆಕ್ಕೊಂಡು ಹೋಗಿ ಅವನ ಮೈ ಮೇಲೆ ಚೆಲ್ಲು, ಆಗ ಮಳೆ ಬಂತೆಂದು ಎಚ್ಚತ್ತು ಎದ್ದು ಬರುತ್ತಾನೆ, ಅಂದನು. ಹೌದು ಸರಿ ಸರಿ, ಎಂದು ನೀರು ತೆಕ್ಕೊಂಡು ಹೋಗಿ ಚೆಲ್ಲಿದಳು. ಮಳೆ ಬಂತೆಂದು ಹುಡುಗನೆದ್ದು ಮನೆಗೆ ಓಡಿ ಬಂದನು. ಆಗ ಮಾಂಸವನ್ನು ಮಗನಿಗೂ ತಿನ್ನಲಿಕ್ಕೆ ತಾವೂ ತಿಂದು ನೆಮ್ಮದಿಯಾಗಿ ಮಲಗಿ ನಿದ್ದೆ ಹೋದರು. ಆ ಮೇಕೆಯನ್ನು ಸಾಕಿದವನು ಅದನ್ನು ಎಲ್ಲೆಲ್ಲೂ ಹುಡಿಕಿ ಕಾಣದೆ ಐದು ಹಣದ ಹೋತನು ವ್ಯರ್ಥವಾಗಿ ಹೋಯಿತೆಂದು ಆ ತಳವಾರನ ಸಂಗಡಲೇ ತನ್ನ ದುಃಖವನ್ನು ಹೇಳಿಕೊಂಡನು. ಅದಕ್ಕವನು ಅಯ್ಯೋ! ಹುಚ್ಚು ಕುರುಬನೇ, ಸಂಜೆಗತ್ತಲ ವೇಳೆಯಲ್ಲಿ ಒಬ್ಬರೂ ಇಲ್ಲದ ಹೊಲದ ಬದಿಬಿನಲ್ಲಿ ಕಟ್ಟಿ ಹಾಕ ಬಹುದೋ? ಹಗ್ಗ ಬಿಚ್ಚಿಕೊಂಡು ಮೇವಿನ ಕೊಬ್ಬಿನಿಂದ ಓಡಿದು ಬಿದ್ದು ಓಡಿ ಹೋಗಿರ ಬಹುದು. ಮೂಡ್ಲಕಡೆ ಹುಡಿಕಿದಿಯಾ? ಪಡುವಲು ದಕ್ಷಿಣ ಉತ್ತರದಲ್ಲಿ ನಹ ನೋಡಿದಿಯಾ? ಹೆಜ್ಜೆಗಳು ಕಾಣಿಸಲಿಲ್ಲವ್ರೋ? ದಾಳು ಮಣ್ಣಿನಲ್ಲಿ ಹೆಜ್ಜೆ ಹ್ಯಾಗೆ ಕಾಣಿಸೀತು? ಎಲ್ಲೂ ಸಿಕ್ಕದೆ ಹೋದ ಮೇಲೆ ಯಾರೋ ದಾರಿ ಹೋಕರು ಬಿಚ್ಚಿ ಹೊತ್ತುಕೊಂಡೇ ಹೋಗಿರ ಬೇಕು, ಅಷ್ಟೇ ಹೊರ್ತು ನಮ್ಮ ಊರಲ್ಲಿ ಇಂಥಾ ಮೋಸದ ಕೆಲಸಗಳು ಹಿಂದಿಗೆ ಎಂದಾದರೂ ನಡದಿದ್ದರೆ ಈ ಹೊತ್ತು ನಡೀತೆಂದು ಅನುಮಾ

ನಿಸ ಬಡವನು, ಎಂದಿಗೂ ಇಲ್ಲ, ಇಂದಿಗೂ ಇಲ್ಲ, ನಿನ್ನ ಬಡವೆ ಅಲ್ಲ, ಯಾತಕ್ಕೆ ದುಃಖ ಪಡುತ್ತೀ? ಸುಮ್ಮನೆ ಇರು, ಎಂದು ಸಮಾಧಾನ ಪಡಿಸಿದನು. ಅದಕ್ಕೆ ಆ ಮೇಕೆಯುವನು ನೀನು ಊರಿಗೆ ತಳವಾರನು, ಊರಿನಲ್ಲಾದ ಕಳ್ಳತನದ ಶೋಧನ್ನು ನೀನೇ ಮಾಡ ಬೇಕು, ಮಾಡದೆ ಬರೀ ಬಾಯಿ ಮಾತಿನ ಬಡಂಬಡಿಕೆಯಿಂದ ನನ್ನ ಬಡವೇ ಹ್ಯಾಗೆ ಬಂದೀತು? ಎಂದು ಸುಮ್ಮನಾದನು. ಹೀಗಿರುವಲ್ಲಿ ಮರು ದಿವಸವೋ ಮೂರನೇ ದಿವಸವೋ ಆ ತಳವಾರನ ಮಗನೂ ಮೇಕೆಯುವನ ಮಗನೂ ಇನ್ನೂ ಕೆಲವು ಮಂದಿ ಹುಡುಗರೂ ತಂಗಳು ತಿಂದು ತಮ್ಮ ತಮ್ಮ ದನಕರಗಳನ್ನು ಹೊಡಕೊಂಡು ಮೇಯಿಸುವದಕ್ಕೆ ಅಡವಿಗೆ ಜೊತೆಯಾಗಿ ಹೋದರು. ಅಲ್ಲಿ ಹುಲ್ಲಿದ್ದ ಕಡೆ ದನಗಳು ಮೇಯುತ್ತಾ ಇರುವಾಗ, ಅವರೆಲ್ಲರೂ ಗುಂಪು ಕೂಡಿ ಮರಳು ಹರಿದಿರುವ ಕಡೆ ಮನಸ್ಸು ಬಂದ ಹಾಗೆ ಆಟಗಳಾಡುತ್ತಾ, ಒಬ್ಬರಿಗೊಬ್ಬರು ನಿನ್ನೆ ರಾತ್ರಿ ನಿಮ್ಮ ಮನೆಯಲ್ಲಿ ಏನು ಮಾಡಿದರು? ಎಂದು ಕೇಳುತ್ತಾ, ನಮ್ಮ ಮನೆಯಲ್ಲಿ ಅವರೇಕಾಳು, ಒಬ್ಬಟ್ಟು, ನಮ್ಮ ಮನೆಯಲ್ಲಿ ಹುರಳೀಕಾಳು, ನಮ್ಮ ಮನೆಯಲ್ಲಿ ಸೊಪ್ಪು, ಎಂದು ಅವರವರು ಹೇಳುತ್ತಾ ಇದ್ದರು; ಈ ಮೇಕೆಯುವನ ಮಗನು ನಮ್ಮ ಮನೆಯಲ್ಲಿ ಒಬ್ಬೀ ಮಾಡಲಿಲ್ಲ, ಹೊತಾರಿನ ತಂಗಳೇ ತಿಂದು ಮಲಗಿಕೊಂಡೆವು, ನಮ್ಮ ಹೋತನು ಎಲ್ಲೋ ಹೋಯಿತೆಂದನು. ಆಗ ಈ ತಳವಾರನ ಮಗನು ನಮ್ಮ ಮನೆಯಲ್ಲಿ ಮೇಕೆ ಕೊಯಿದಿದ್ದರೆಂದನು. ಆ ಮಾತನ್ನು ಕೇಳಿದ ಹುಡುಗರಿಂದ ಅದು ಊರಲ್ಲಿ ತಿಳಿದು, ಮೇಕೆಯುವನು ತಳವಾರನ ಮೇಲೆ ಕಳ್ಳವಿಕೆ ಹೊ

ರಿಸುವದಕ್ಕೆ ಚಾವಡಿಗೆ ಬಂದು ಹೇಳಿದನು. ಚಾವಡಿಯವನು ತಳವಾರನನ್ನು ಕರಿಸಿ ನಿನ್ನ ಮಗನು ಹೇಳಿದ ಮಾತಿನ ಸಾಕ್ಷಿಯಿಂದ ನಿನ್ನ ಮೇಲೆ ಕಳ್ಳತನ ಹೊರುತ್ತದೆ, ಇದಕ್ಕೇನು ಉತ್ತರ ಎನ್ನಲು, ಅವನು ಎಂದಿನ ಮಾತು ಹೇಳುತ್ತಾನೋ ಬಾಲಕನಂದರು ವಿಚಾರಿಸರಿ ಅಂದನು. ಚಾವಡಿಯಲ್ಲಿ ಆ ಹುಡುಗನನ್ನು ಕೇಳಿದ್ದಕ್ಕೆ ಅವನು ಮಳೆ ಬಂದ ದಿವಸ ರಾತ್ರಿ ನಾನು ಮಾಂಸ ತಿಂದೆನೆಂದು ಹೇಳಿದನು. ಮೇಕೆ ಹೋದ ರಾತ್ರಿ ಮಳೆ ಇಲ್ಲವಾದ್ದರಿಂದ ತಳವಾರನ ಮೇಲೆ ತಪ್ಪು ಹೊರಲಿಲ್ಲ. ಈ ಮೇರಿಗೆ ಕಳ್ಳರು ಸುಳ್ಳಾಡಿ ತಪ್ಪಿಸಿಕೊಳ್ಳುವರು.

---

## 27. MISCHIEVOUSNESS.

### ೨೭. ಕೇಡಕುತನ.

ಮಾರ್ಗಸ್ಥರಾದ ಇಬ್ಬರು ಸ್ನೇಹಿತರು ಒಂದು ಊರಿಗೆ ಬಂದು ಒಬ್ಬ ಬ್ರಾಹ್ಮಣನ ಮನೇ ನಡನೆಯಲ್ಲಿ ಇಳಿದು ಕೊಂಡರು. ಆಗ ಆ ಮನೆಯ ಬ್ರಾಹ್ಮಣನು ಅವರಿಗೆ ರಾತ್ರಿ ಭೋಜನ ಮಾಡಿಸಿ ಅವರನ್ನು ಬಹಳ ಆದರಿಸಿದನು. ಅವರಿಬ್ಬರೂ ಆ ಮನೆಯ ಬ್ರಾಹ್ಮಣನ ಗುಣಕ್ಕೂ ಆತನ ಹೆಂಡತಿಯ ಗುಣಕ್ಕೂ ಸಂತೋಷಿಸಿ, ಈ ಗಂಡ ಹೆಂಡರ ಅನ್ಯೋನ್ಯ ಪ್ರೀತಿಯೂ ಸ್ನೇಹವೂ ಚನ್ನಾಗಿದೆ, ಈ ಮೇರಿಗೆ ಎಲ್ಲೂ ನೋಡಲಿಲ್ಲನೆಂದು ಮಾತಾಡಿಕೊಂಡರು. ಆಗ ಅವರೊಳಗೊಬ್ಬನು ಇನ್ನೊಬ್ಬನನ್ನು ನೋಡಿ, ಇಂಥಾ ಅನ್ಯೋನ್ಯ ದಂಪತಿಗಳಿಗೆ ಕಲಹ ಹುಟ್ಟಿಸು

ತ್ತೀನೆ ನೋಡುತ್ತೀಯಾ? ಎಂದನು. ಇಂಥಾವರು ಎಂದೆಂದಿಗೂ ಜಗಳವಾಡರೆಂದು ಆ ಇನ್ನೊಬ್ಬನು ಹೇಳಿದನು. ಮೊದಲಿನ ವನು ನೀನು ಹಾಗನ್ನ ಬೇಡ, ಇವರ ಸ್ನೇಹ ಕೆಟ್ಟು ಹೋಗುವಂ ತೆ ನಾನು ಮಾಡುತ್ತೇನೆ, ಅದನ್ನು ತಿರಿಗಿ ನೆಟ್ಟಗೆ ಮಾಡುವದಕ್ಕೆ ನಿನಗೆ ಸಾಮರ್ಥ್ಯವಿದ್ದರೆ ಹೇಳೆಂದನು. ಈ ದಂಪತಿಗಳ ಸ್ನೇ ಹಾ ಕೆಡಿಸುವದಕ್ಕೆ ನಾನೇ ಸರಿ ಎಂತ ಒಬ್ಬನೂ, ಅದನ್ನು ನೆ ಟ್ಟಗೆ ಮಾಡುವದಕ್ಕೆ ನಾನೇ ಸರಿ ಎಂದು ಮತ್ತೊಬ್ಬನೂ ಪ್ರತಿ ಜ್ಞೆ ಮಾಡಿದರು. ಹೀಗೆ ರಾತ್ರಿ ಕಳದು ಉದಯವಾಗುತ್ತಲೇ ಈ ಕೆಡಕನು ಸಾಮುದ್ರಿಕಾ ಲಕ್ಷಣವನ್ನೂ ಗತಾಗತ ವರ್ತ ಮಾನಗಳನ್ನೂ ಹೇಳುವ ಜ್ಞಾನಿಯ ವೇಷವನ್ನು ಹಾಕಿಕೊಂ ಡು ಜೋತಿಗಾರನ ಸಂಗಡ ತತ್ವ ವಿಷಯವಾದ ಮಾತುಗಳನ್ನು ಹೇಳಲಾರಂಭಿಸಿದನು. ಆಗ ಆ ಮನೆಯ ದಂಪತಿಗಳು ಮೋ ಸ ತಾನುಗಳು ತಿಳಿಯದ ಸಾಧು ಗುಣ ಉಳ್ಳವರಾಗಿದ್ದ ಕಾರಣ ಅವನು ಮಹಾ ಜ್ಞಾನಿ ಎಂದು ನೆನಸಿ ತಮಗೆ ಏನಾದರು ಉಪ ದೇಶ ಮಾಡ ಬೇಕೆಂದು ವಿನಯದಿಂದ ಬೇಡಿ ಕೊಂಡರು. ಆಗ ಈ ಕಪಟ ಜ್ಞಾನಿಯು ಆ ಬ್ರಾಹ್ಮಣನಿಗೆ ತಿಳಿಯದೆ ಅವನ ಹೆಂಡತಿಯನ್ನು ನೋಡಿ, ಅಮ್ಮಾ, ನೀನು ಪುಣ್ಯಾತ್ಮಳು, ಅದ ರೆ ನಿನ್ನ ಗಂಡನು ಪೂರ್ವ ಜನ್ಮದಲ್ಲಿ ಉಪ್ಪಾರನು, ಪರಿಕ್ಷಿಸ ಬೇಕಾದರೆ ಆತನು ನಿದ್ದೆ ಹೋಗುವಾಗ ಆತನ ಬೆನ್ನನ್ನು ನೆಕ್ಕಿ ನೋಡು, ನಾಲಿಗ್ಗೆ ಉಪ್ಪುಪ್ಪಾಗಿರುವದೆಂದನು; ಸಂಗಡಲೇ ಹೆಂ ಡತಿಗೆ ತಿಳಿಯದ ಹಾಗೆ ಗಂಡನನ್ನು ನೋಡಿ, ಅಯ್ಯಾ ಬ್ರಾಹ್ಮ ಣೋತ್ತಮನೇ, ನಿನ್ನ ಹೆಂಡತಿಯು ಪೂರ್ವ ಜನ್ಮದಲ್ಲಿ ನಾಯಿ ಯಾಗಿದ್ದು ಏನೋ ನಿನ್ನ ಪುಣ್ಯದಿಂದ ಈಗ ನಿನಗೆ ಹೆಂಡತಿ

ಯಾಗಿದ್ದಾಳೆ, ಇವಳು ನಿದ್ದೆ ಹೊತ್ತಿನಲ್ಲಿ ನಿನ್ನ ಬೆನ್ನನ್ನು ನೆಕ್ಕುವಳು, ಅದಕ್ಕಿದೇ ದೃಷ್ಟಾಂತವೆಂದು ಹೇಳಿದನು. ಆಗ ಮೂಢ ದಂಪತಿಗಳು ಇವನ ಕಪಟದ ಮಾತ ನಂಬಿ ಒಬ್ಬರನ್ನೊಬ್ಬರು ಪರಿಕ್ಷಿಸುವದಕ್ಕೆ ಸಿದ್ಧವಾದರು. ಆ ರಾತ್ರಿ ಈ ಕೆಡಕನು ಅಲ್ಲಿರದೆ ಬೇರೆ ಸ್ಥಳದಲ್ಲಿದ್ದನು, ಮತ್ತೊಬ್ಬನು ಮಾತ್ರ ಆ ನಡವೆಯಲ್ಲಿ ಮಲಗಿದನು. ಅರ್ಧ ರಾತ್ರಿಯಲ್ಲಿ ಈ ಸ್ತ್ರೀಯು ನಿದ್ದೆ ಹೋಗುವ ಹಾಗೆ ಎಚ್ಚತ್ತಿರುವ ತನ್ನ ಪುರುಷನ ಬೆನ್ನನ್ನು ನೆಕ್ಕಿದಳು, ಆಗ ಅವನು ಛೀ! ನಾಯೀ ಎಂದು ಕಪೋಳ ಶುದ್ಧಿ ಮಾಡಿದನು, ಛೀ! ಉಪ್ಪಾರನೇ ಎಂದು ಗಂಡನಿಗೆ ಮುಯ್ಯಿಗೆ ಮುಯ್ಯಿ ತೀರಿಸಿದಳು. ಈ ಮೇರೆಗೆ ಪರಸ್ಪರ ಕಲಹ ಉಂಟಾಗಿ ಇಬ್ಬರೂ ಹಾಸಿಗೆಯಿಂದ ಎದ್ದು ಅಂಗಳಕ್ಕೆ ಓಡಿ ಬಂದರು, ಈ ಪ್ರಕಾರ ಜಗಳವಾಡುವ ದಂಪತಿಗಳನ್ನು ನೋಡಿ ಇದು ಕೆಡಕನಿಂದ ಬಂದ ಕೇಡೆಂದು ತಿಳಿದು, ನಡವೆಯಲ್ಲಿದ್ದವನು ಒಳ್ಳೇ ಮಾತಿನಿಂದ ಅವರನ್ನು ಕರದು ಹತ್ರ ಕುಳ್ಳರಿಸಿ ಕೊಂಡು, ಆ ಹೆಂಗಸನ್ನು ನೋಡಿ, ಅಮ್ಮಾ, ನೀನು ಹೀಗೆ ಹೇಳಬಾರದು, ನಿನ್ನ ಮುಂಗೈಯನ್ನು ನೆಕ್ಕಿ ನೋಡಿ ಉಪ್ಪೋ ಸಪ್ಪೆಯೋ ನಿಜವಾಗಿ ಹೇಳೆಂದನು. ಅವಳು ಅದೇಪ್ರಕಾರ ನೋಡಿ ಉಪ್ಪಾಗಿದೆ ಎಂದು ಹೇಳಲು, ಅವನು ವಂಚಕನ ಮಾತ ನಂಬಬೇಡ, ಎಲ್ಲರ ಮೈಯ್ಯೂ ಹೀಗೆ ಯಿರುವದು, ಗಂಡನ ಮೇಲೆ ಪ್ರೀತಿ ಇಡು ಎಂದು ಬೋಧಿಸಿ, ಬ್ರಾಹ್ಮಣನನ್ನು ನೋಡಿ ಹೆಂಡತಿಯನ್ನು ದ್ವೇಷಿಸ ಬೇಡ, ಅವಳು ಸ್ವಬುದ್ಧಿಯಿಂದ ಮಾಡಿದ ತಪ್ಪಲ್ಲ, ಕ್ಷಮಿಸು, ಎಂದು ಸಮಾಧಾನ ಪಡಿಸಿದನು. ಹೀಗೆ ನೀಚರು ಕಲಹವನ್ನೂ ಸಾಧುಗಳು ಸಮಾಧಾನವನ್ನೂ ಅಪೇಕ್ಷಿಸುವರು.

---

## 28. THE SLY FOX.

### ೨೮. ನರಿಯ ತಂತ್ರ.

ಒಂದು ಅಡವಿಯಲ್ಲಿ ಒಂದು ನರಿ ಮೂರು ನಾಲ್ಕು ದಿವಸ ಜಡಿ ಮಳೆಯಿಂದ ಆಹಾರ ಸಿಕ್ಕದೆ ತಂಗೆಟ್ಟು ಹಸಿವಿನಿಂದ ಬಳಲಿ ಏನು ಸಿಕ್ಕಿದರೂ ತಿಂದೇನೆಂದು ಅಡವಿಯಲ್ಲಿ ತಿರುಗುತ್ತಾ ಇರುವಾಗ ಅಲ್ಲಿ ಒಂದು ಹಳೆ ಎಕ್ಕಡದ ಜೋಡು ಬಿದ್ದಿತ್ತು. ಅದು ನಾಲ್ಕು ದಿವಸದಿಂದ ಮಳೆಯಲ್ಲಿ ನೆನೆದು ಮೆತ್ತಗಾಗಿ ನರಿಗೆ ತಿನ್ನುವದಕ್ಕೆ ಶಬ್ಬಿಯಾಗಿತ್ತು. ಆ ನರಿಯು ಅಲ್ಲಿಗೆ ಬಂದು ನಿಂತು ಈ ಎಕ್ಕಡದವನು ಇಲ್ಲಿ ಎಲ್ಲಾದರು ಹೊಂಚಿ ತನ್ನನ್ನು ಹೊಡಿಯುವದಕ್ಕೆ ಇದ್ದಾನೇನೋ ಎಂಬ ಭಯದಿಂದ, ಓ ಎಕ್ಕಡದೊಡೆಯನೇ, ನಾನು ಹಸಿವಿನಿಂದ ಸಾಯುತ್ತೇನೆ, ಮಳೆಯಲ್ಲಿ ನೆನದು ನಿನ್ನ ಕಾಲಿಗೆ ಬಾರದೆ ನೀನು ಬಿಸಾಡಿದ ಎಕ್ಕಡವನ್ನು ನನಗೆ ತಿನ್ನುವದಕ್ಕೆ ಕೊಡು, ನಾನೊಂದು ಹಣ ಕೊಡುತ್ತೇನೆ, ನೀನು ಹೊಸ ಎಕ್ಕಡವನ್ನು ಕೊಂಡುಕೋ ಎಂದು, ದೈನ್ಯದಿಂದ ಕೂಗಿ ಹೇಳಿತು. ಆ ಮಾತನ್ನು ಸರ್ವ ಜೀವರಾಶಿಗೂ ಕಾಲಕ್ಕೆ ತಕ್ಕ ಆಹಾರವನ್ನು ಉಂಟು ಮಾಡುವ ಭಗವಂತನು ಕೇಳಿ ತಿನ್ನು ತಿನ್ನು ಹಣಾ ಕೊಡು ಎಂದು ಅಶರೀರ ವಾಕ್ಕಿನಿಂದ ನುಡಿದನು. ಆ ಮೇಲೆ ನರಿಯು ಬೇಗ ಬೇಗ ಅದನ್ನು ತಿಂದು ಬಿಟ್ಟು ಹಣದ ತಗಾದೆಗೆ ಅಂಜಿ ಓಡಿ ಬಂದು ಹೊದರಿನಲ್ಲಿ ಹೊಕ್ಕೊಂಡಿತು. ಆಗ ದೇವರು ಮನುಷ್ಯಾಕಾರದಿಂದ ನರಿಯ ಎದುರಿಗೆ ನಿಂತು ಹಣ ತಾ ಎಂನಲು, ನರಿಯು ಕೆಟ್ಟೆನಲ್ಲಾ, ಇನ್ನೇನು ದಾರಿ? ಎಲ್ಲಿಗೆ ಹೋಗಲಿ? ಎಂದು ಮೈ ತಿಳಿಯದೆ ಓಡು

ತ್ತಾ ಕಲ್ಲು, ಮುಳ್ಳು, ಹಳ್ಳ ಕೊಳ್ಳ, ಮುಂತಾದ್ದರಲ್ಲಿ ಬಿದ್ದು ಎದ್ದು ಕಾಲು ಮುರಿದು, ಕಿವಿ ಹರಿದು, ಕಣ್ಣು ತಗಲಿ, ರಕ್ತ ಹೊರಟು, ಪಜೀತಿಯಾಗಿ ಮುಂದಕ್ಕೆ ಹೋಗಲಾರದೆ, ಇನ್ನೇನಾದರು ಆಗಿ ಹೋಗಲಿ, ನನ್ನಾಟ ಮುಗೀತು, ಎಂದು ಒಂದು ದೊಡ್ಡ ಗುಂಡಿನ ಮರೆಯಲ್ಲಿ ಹೊಕ್ಕೊಂಡಿತು. ಆಗ ಎಲ್ಲಿ ಹೋದರೂ ಬಿಡದ ಸಾಲಗಾರನು ಎದುರಾಗಿ ಬಂದು ನಿಂತು ಕೊಂಡು „ಹಣ ತಾ, ಹಣ ತಾ" ಅಂದನು. ಅದಕ್ಕೆ ನರಿಯು, „ಇಳಿಯ ಮುಣಿಗಿದ ಮೇಲೆ ಛಳಿ ಏನು ಘಾಳಿ ಏನು" ಎಂಬ ಸಾಮತಿಯು ಹಾಗೆ ನನಗೇನು ಭಯ ? ನನ್ನಿನೇನು ಮಾಡುತ್ತಾನೆ ? ನರಿಯು ಕೊಂದವರಿಲ್ಲ ನಾಯಿತಿಂದವರಿಲ್ಲ" ಎಂಬ ಸಾಮತಿ ಉಂಟಷ್ಟೆ? ಹಾಂಗಲ್ಲದೆ ನನ್ನ ಕೊಂದು ಹಾಕಿದರೂ ಹಾಕಲಿ, ನಾನೊಂದು ಮಾತು ಕೇಳುತ್ತೇನೆ, ಈ ಸಾಲಗಾರನು ಅದಕ್ಕೆ ಏನು ಉತ್ತರ ಹೇಳುತ್ತಾನೋ ನೋಡೋಣ ಎಂದು ಧೈರ್ಯ ತಂದುಕೊಂಡು, ಅಯ್ಯಾ, ಹಣಾ ತಾ ಹಣಾ ತಾ ಎಂದು ಕೇಳುತ್ತೀಯಲ್ಲಾ, ಹಣವ್ಯಾವದು? ನೀನ್ಯಾರು? ಅನ್ನಲು, ದೇವರು ಹಣವ್ಯಾವದೆಂದು ಕೇಳುತ್ತೀ ನೀನು ತಿಂದ ಹಳೇ ಎಕ್ಕಡಕ್ಕೆ ಕೊಡುವದಾಗಿ ಒಪ್ಪಿಕೊಂಡ ಕ್ರಯ ನೆನಪಿಲ್ಲವ್ರೋ? ಅಂದನು. ಅದಕ್ಕೆ ನರಿಯು ಹಳೇ ಎಕ್ಕಡವನ್ನು ತಿಂದ ನರಿಗೆ ಕಣ್ಣು, ಕಾಲು, ಕಿವಿ, ಮೈ ಎಲ್ಲಾ ಚನ್ನಾಗಿತ್ತೋ ಇಲ್ಲವ್ರೋ? ಹೇಳೆನಲು, ದೇವರು ಹೌದು, ಆವಾಗ ಅದಕ್ಕೆ ಅದೆಲ್ಲಾ ಚನ್ನಾಗಿ ಇತ್ತು; ಅಂದನು. ನರಿಯು ಹಾಗೋ? ಅದೆಲ್ಲಾ ಚನ್ನಾಗಿ ಯಾವ ನರಿಗೆ ಅದೆಯೋ ಅದು ನಿನಗೆ ಹಣ ಕೊಡ ಬೇಕಾಗಿದ್ದೀತು, ನಾನು ಕಾಲು ಮುರಿದು ಕಿವಿ ಹರಿದು ಕಣ್ಣು ಹಾಕಿ ಮೈ ಎಲ್ಲಾ ಪ್ರಾ

ಪುಡಿಯಾಗಿ ರಕ್ತ ಸೋರಿಸಿಕೊಳ್ಳುತ್ತಾ ಬಿದ್ದಿದ್ದೇನೆ, ನನ್ನನ್ನು ಹಣ ಕೇಳುವದಕ್ಕೆ ಕಾರಣವೇನು ? ಎಂದು ನುಡಿಯಿತು. ಭಗವಂತನು ನಕ್ಕು ನರಿಗಳು ತಂತ್ರದಿಂದ ಜೀವಿಸಲಿ ಎಂದು ಅಂತರ್ಧಾನವಾದನು.

---

## 29. THE SAGACITY OF THE DOG.

### ೨೯. ನಾಯಿಯ ಗುಣ.

ಒಬ್ಬ ತುರುಕನ ಬಳಿಯಲ್ಲಿ ಒಂದು ನಾಯಿ ಉಂಟು. ಅದು ಬೇಟೆ ಮುಂತಾದ ಕೆಲಸಗಳಲ್ಲಿ ಬಹಳ ಸಮರ್ಥ್ಯ ಉಂಟಾದ್ದಾಗಿ ಇತ್ತು. ಅವನು ಆ ನಾಯನ್ನು ಒಬ್ಬ ಸಾವುಕಾರನ ಬಳಿಯಲ್ಲಿ ಅಡವಿಟ್ಟು ನೂರು ವರಹಾ ಸಾಲ ತೆಕ್ಕೊಂಡನು. ಈ ಸಾಲಾ ಕೊಟ್ಟು ತೆಕ್ಕೊಂಡವರ ಊರುಗಳು ಒಂದೆರಡು ಹರದಾರಿಗಳ ದೂರದಲ್ಲಿ ಬೇರೆ ಬೇರೆಯಾಗಿದ್ದವು. ಹೀಗಿರುವಲ್ಲಿ ಆ ಅಡವಿನ ನಾಯಿ ಈ ಸಾವುಕಾರನ ಮನೆಯಲ್ಲಿ ಹಗಲೂ ರಾತ್ರಿಯು ಹತ್ತೇಟಾಳು ಕಾವಲು ಇದ್ದ ಹಾಗೆ ಬಹು ಜಾಗ್ರತೆ ಮಾಡುತ್ತಾ ಇರುವದು. ಆ ವರ್ತಕನ ಮನೆಗೆ ನಾನಾವಿಧವಾದ ವ್ಯಾಪಾರಗಳಿಗೋಸ್ಕರ ಅನೇಕ ಜನಗಳು ಬರುತ್ತಾ ಹೋಗುತ್ತಾ ಇದ್ದಾಗ್ಯೂ, ಅವರವರ ಲಕ್ಷಣಗಳನ್ನು ಹೊರಬಾಗಲಲ್ಲೇ ತಿಳಿದು ಕೊಂಡು ಯಾವಾಗಲೂ ಬರುವ ಹಳಬರನ್ನು ಸರಾಗವಾಗಿ ಒಳಕ್ಕೆ ಬಿಡುತ್ತಾ, ಹೊಸಬರನ್ನು ಘುರ್ಕಾಯಿಸಿ ಅಡ್ಡಿ ಮಾಡಿ ಯಜಮಾನನ ಸನ್ನೆಯು ಮೇರಿಗೆ ಒಳಕ್ಕೆ

ಬಿಡುತ್ತಾ, ಮನೆ, ಅಂಗಳ, ಹಿತ್ತಲು, ಮುಂದಿನ ತಲಬಾಗಲು, ಹಿಂದಿನ ದಿಡ್ಡಿ ಬಾಗಲು, ಮುಂತಾದ ಎಲ್ಲಾ ಕಡೆಯೂ ತಿರುಗುತ್ತಾ ಇರುವದಲ್ಲದೆ, ರಾತ್ರಿಯಲ್ಲಿ ಅವನಿಗೆ ಕಾವಲಾಗಿ ಕಳ್ಳಕಾಕರು ಸುಳಿಯುವ ಹಾಗೆ ಎಚ್ಚರಿಕೆಯಾಗಿರುವದು. ಹೀಗಿರುವಲ್ಲಿ ಇಂಥಾ ನಾಯುನ್ನು ಅಟವರಿಸಿ ಗಂಡೀ ಜೋರನಾದ ಒಬ್ಬ ಕಳ್ಳನು ಈ ಸಾವುಕಾರನ ಬಂಡವಾಳವಾದ ಮೂಲ ದ್ರವ್ಯದ ಮನೆಯನ್ನು ಮಾಳಿಗೇ ಮೇಲಿನಿಂದ ಕನ್ನಾ ಕೊರದು ಮನೆಯೊಳಗಿಳಿದು ತಾನು ಹೊರುವಷ್ಟು ಮೂರು ನಾಲ್ಕು ಚೀಲಗಳ ಹಣವನ್ನು ಹೊತ್ತು ಕೊಂಡು, ತಾನು ಬಂದ ದಾರಿಯಲ್ಲಿ ಏರಿ ಹೋಗಲಾರದೆ, ಬೀಗ ಮುದ್ರೆಗಳಿಂದ ಬಂದೋಬಸ್ತಾಗಿರುವ ಆ ಕೊಠಡಿಯ ಬಾಗಲಿನ ಒಂದು ಪಕ್ಕದ ಗೋಡೆಯಲ್ಲಿ ಕನ್ನಾ ಕೊರದು ಆ ಗಂಡಿಯಲ್ಲಿ ದೂರಿ ಹೊರಟನು. ಆ ಸುಳಿವ ಕಂಡು ಈ ನಾಯಿ ಎಲ್ಲಿಂದಲೋ ಬಾಣ ದೂರಿದ ಹಾಗೆ ದೂರಿ ಹಾರಿ ಕಳ್ಳನ ಗೋಮಾಳೆಯನ್ನು ಹಿಡಿದು ಕಚ್ಚಿ ಕೆಡವಿ ಘಟ್ಟಿಯಾಗಿ ಬಗಳಿತು. ಆಗ ಸಾವುಕಾರನು ಬೇಗ ಎದ್ದು ಬಂದು ಸತ್ತ ಕಳ್ಳನನ್ನೂ ಬಿದ್ದಿದ್ದ ಹಣದ ಚೀಲಗಳನ್ನೂ ಬಹು ಕೋಪದಿಂದ ಕಾಲು ಕೆರದು ಮೊರೆಯುವ ನಾಯು ರಭಸವನ್ನೂ ನೋಡಿ ಆಶ್ಚರ್ಯ ಪಟ್ಟು, ನಾಯು ಮೈ ತಡವಿ ಕೊರಳು ತಟ್ಟಿ ಮುದ್ದಿಟ್ಟು, ಸಮದಾಯಿಸಿ, ಚೀಲಗಳನ್ನು ಆಳುಗಳ ಕೈಲಿ ಮನೆಯೊಳಕ್ಕೆ ಹೊರಿಸಿ, ಕಳ್ಳನ ಹೆಣವನ್ನು ಎಳಸಿ ಬಿಸಾಡಿಸಿ, ತರುವಾಯ ತನ್ನ ಸಾಲದ ಅಸಲು ಚಕ್ರಂಗಡಿಸಹ ತನಗೆ ಸಂತೆಂದು ಒಳ್ಳೇ ಬಾಷೀಕಾಗದವಲ್ಲಿ ರಶೀದಿ ಬರದು ನಾಯಿಯ ಅಗಲವಾದ ಹಣೆಯಲ್ಲಿ ಕಟ್ಟಿ, ಅವನ್ನು ನಿನ್ನ ಸಾಕಿದ

ವನ ಬಳಿಗೆ ಹೋಗೆಂದು ಕಳುಹಿಸಿ ಬಿಟ್ಟನು. ಅದು ಬಹು ಬುದ್ಧಿ ಉಂಟಾದ ನಾಯಿ ಆದ್ದರಿಂದ ಅಲ್ಲಿಂದ ಹೊರಟು ಸಾಕಿದ ತುರುಕ ನಿದ್ದ ಊರಿಗೆ ಓಡಿ ಬಂತು. ಆಗಲೇ ತುರುಕನು ಮನೆಯಿಂದ ಹೊರಟು ಬೀದಿಯಲ್ಲಿ ಬರುತ್ತಾ, ದೂರವಾಗಿ ಬರುವ ನಾಯ ನ್ನು ಕಂಡು, ತಪ್ಪಿಸಿಕೊಂಡು ಬಂತೆಂದು ಕೋಪಿಸಿ, ಕೆಟ್ಟ ನಾ ಯೇ, ನನ್ನ ನಾಲಿಗೆವಾಸಿಯನ್ನು ಹೋಗಲಾಡಿಸಿದ ನಿನ್ನ ತಲೆ ಯನ್ನು ಒಂದೇ ಪೆಟ್ಟಿನಲ್ಲಿ ಒಡದು ಕೊಂದು ಹಾಕಲೋ, ಎಂದು ಕೈಯಲ್ಲಿದ್ದ ದೊಣ್ಣೆಯನ್ನು ಮೇಲಕ್ಕೆತ್ತುವಾಗ, ನಾಯ ನೆತ್ತಿ ಯ ರಶೀದಿಯನ್ನು ಕಂಡು, ಓದಿ ಸಂತೋಷದಿಂದ ಅಯ್ಯೋ ವ್ಯರ್ಥವಾಗಿ ನಾಯನ್ನು ಕೊಂದು ಹಾಕುತ್ತಾ ಇದ್ದೆನಲ್ಲಾ, ಈಗ ನಾಯೂ ಬದಿಕಿತು, ನನಗೂ ಮೇಲಾಯಿತು, ಅಂದನು. ಹೀಗೆ ತಾಳ್ಮೆಯಿಂದ ಕ್ಷೇಮವೂ, ತ್ವರೆ ಪಟ್ಟರೆ ಕೇಡೂ ಸಂಭ ವಿಸುವವು.

---

## 30. GIFTS OF FRUITS BY KRISTNARAYA'S MOTHER.

### ೩೦ ರಾಯನ ತಾಯಿಯ ಫಲದಾನ.

ಹಿಂದಕ್ಕೆ ನರಪತಿ ಕೃಷ್ಣರಾಯನು ಆನೆಗೊಂದಿ ಸಂಸ್ಥಾನ ಕ್ಕೆ ಸಳಿತವಾದ ಕರ್ನಾಟಕದೇಶ ಯಾವತ್ತು ಏಕರಾಜ್ಯವಾಗಿ ಆಳುತ್ತಿದ್ದನು. ಆ ಸಂಸ್ಥಾನಕ್ಕೆ ಅಪ್ಪಾಜಿ ಎಂಬ ಮಂತ್ರಿಯು ಮುಖ್ಯ ಪ್ರಧಾನಿಯಾಗಿ ಇದ್ದನು. ಆ ಸಂಸ್ಥಾನದಲ್ಲಿ ಅನೇಕ ವಿದ್ವಾಂಸರೂ ಕವೀಶ್ವರರೂ ಇರುವರು. ಅವರೊಳಗೆ ವಿದ್ವ

ತ್ಕವಿಯಾಗಿಯೂ ವಿಕಟಕವಿಯಾಗಿಯೂ ಪ್ರಸಿದ್ಧನಾದ ತೆನ್ನಾಲ ರಾಮಕೃಷ್ಣನಿರುವನು. ಆ ಸಂಸ್ಥಾನದಲ್ಲಿ ಯುಕ್ತಿ ಚಮತ್ಕಾರ ವಿನೋದ ಹಾಸ್ಯ ಮೊದಲಾದವುಗಳಿಗೆ ಅವನು ತವರುಮನೆಯಾಗಿರುವನು. ರಾಯರ ತಾಯಿಯಾದ ನಾಗಮಾಂಬೆಯು ಅನೇಕವಾದ ರಾಜಭೋಗ ಸೌಖ್ಯಗಳನ್ನನುಭವಿಸಿ ದಾನ ಧರ್ಮ ಪರೋಪಕಾರಗಳನ್ನು ಅನೇಕವಾಗಿ ಮಾಡಿ, ಮಹಾ ರಾಯತಿ, ಮಹಾ ರಾಜಮಾತೆ, ಪುಣ್ಯವಂತೆ, ಎಂದು ಕೀರ್ತಿ ಮಾತಿನವಾಸಿಯನ್ನು ಪಡದು, ಬಹುಕಾಲ ಬದಿಕಿ, ಅವಸಾನಕಾಲ ಬಂದ ದಿವಸದಲ್ಲಿ ನಿತ್ಯವೂ ಮಾಡುವ ದಾನಗಳಿಗಿಂತಲು ವಿಶೇಷವಾಗಿ ಗೋದಾನ, ಭೂದಾನ, ಕನ್ಯಾದಾನ, ಹಿರಣ್ಯದಾನ ಮೊದಲಾದವುಗಳನ್ನೆಲ್ಲಾ ಮಾಡಿ, ಫಲದಾನ ಕಾಲದಲ್ಲಿ ಸಿದ್ಧವಾಗಿರುವ ಎಲ್ಲಾ ಫಲಗಳನ್ನು ದಾನ ಮಾಡಿದ್ದಲ್ಲದೆ, ಹಣ್ಣುಗಳೊಳಗೆ ರಸವತ್ತಾದ್ದು ಮಾವಿನ ಹಣ್ಣೆಂದು ತಿಳಿದು ಅದನ್ನು ತರಿಸ ಬೇಕೆಂದು ಸುಪುತ್ರನಾದ ರಾಯನಿಗೆ ಆಜ್ಞಾಪಿಸಿದಳು. ಆಗ ಮಾವಿನ ಹಣ್ಣಿನ ಕಾಲವಲ್ಲದ್ದರಿಂದ ಉಗ್ರಾಣದಲ್ಲಿ ಜೇನು ತುಪ್ಪದ ಪರಿವೆಗಳಲ್ಲಿ ಊರ ಹಾಕಿದ್ದ ಶ್ರೇಷ್ಠವಾದ ಮಾವಿನ ಹಣ್ಣುಗಳನ್ನು ಆತನು ತರಿಸುವಷ್ಟರಲ್ಲೇ ಕಾಲ ಪರಿಪಕ್ವವಾಗಿ ರಾಜಮಾತೆ ದೈವ ಗತಿಯನ್ನು ಹೊಂದಿದಳು. ಹೀಗೆ ಫಲದಾನ ಮಾಡ ಬೇಕೆಂಬ ಆಶೆಯು ನೆರವೇರದೆ ಹೋದ ತಾಯಿಯ ಕೊರತೆಗೆ ರಾಯನು ಮಹಾ ವ್ಯಸನ ಪಟ್ಟು, ಇದಕ್ಕೇನು ಮಾಡಿದರೆ ತಾಯಿಗೆ ತೃಪ್ತಿ ಉಂಟಾದೀತೆಂದು ಪುರೋಹಿತರು ಮುಂತಾದ ಬ್ರಾಹ್ಮಣರನ್ನು ಕೇಳಿದ್ದಕ್ಕೆ ಭಂಗಾರದ ಮಾವಿನ ಹಣ್ಣುಗಳನ್ನು ಮಾಡಿಸಿ ದಾನವಾಗಿ ಬ್ರಾಹ್ಮರಿಗೆ ಕೊಟ್ಟರೆ ಪೋತುರ್, ಆ

ತಾಯಿಯ ರೂಪವಾದ ಭೂತಕ್ಕೆ ತೃಪ್ತಿಯಾಗಲಾರದೆಂದು ಅವೆರು ಹೇಳಿದರು. ಆ ಮಹಾ ರಾಯನು ಭಂಗಾರದಿಂದ ಸಾವಿರಾರು ಮಾವಿನ ಹಣ್ಣುಗಳನ್ನು ಮಾಡಿಸಿ, ಅನೇಕ ಬ್ರಾಹ್ಮರಿಗೆ ದಾನವಾಗಿ ಕೊಟ್ಟನು. ಆಗ ವಿಕಟಕವಿಯಾದ ರಾಮ ಕೃಷ್ಣನು ಈ ಸಂಗತಿಯನ್ನು ಕುರಿತು ಬಹಳ ವಿನೋದ ಮಾಡ ಬೇಕೆಂದು ನೆನೆಸಿ, ರಾಯನ ಅರಮನೆಯಿಂದ ದಾನವನ್ನು ತೆಗದು ಕೊಂಡು ಹೊರಟ ಬ್ರಾಹ್ಮಣರನ್ನೆಲ್ಲಾ ಬಹಳ ವಿನಯದಿಂದ ತನ್ನ ಮನೆಗೆ ಕರದುಕೊಂಡು ಹೋಗಿ ತಕ್ಕ ಮರ್ಯಾದೆಗಳನ್ನು ಮಾಡಿಸಿ ನಮಸ್ಕಾರ ಮಾಡಿ ಎದ್ದು ನಿಂತು ಕೈ ಜೋಡಿಸಿಕೊಂಡು, ಬ್ರಾಹ್ಮಣೋತ್ತಮರೇ, ಬಹು ಕಾಲ ಬದಿಕಿದ ನಮ್ಮ ತಾಯಿಗೆ ಕಡೆಗಾಲಕ್ಕೆ ಧನುರ್ವಾಯು ಬಂದು ಕೀಲು ಕೀಲು ಬಿಕ್ಕೊಂಡು ಪ್ರಾಣ ಬಿಡುವಾಗ ಅವಳು ನನ್ನ ನೋಡಿ, ಮಗನೇ, ನನಗೊಂದು ಬರೆ ಹಾಕಿಸಿದರೆ ಈ ಬಿಗುವು ಬಿಟ್ಟು ಇನ್ನೂ ಕೆಲವು ದಿವಸ ಬದುಕುವೆನೆಂದು ಸೈಗೆ ಮಾಡಿದಳು, ನಾನು ಬರೆಗೋಲನ್ನು ಈಗ ನನ್ನ ಕೈಲಿರುವ ಪ್ರಕಾರ ಕೆಂಪಗೆ ಕಾಸಿ ತರುವಷ್ಟರಲ್ಲೇ ಪ್ರಾಣ ಬಿಟ್ಟಳು, ನನ್ನ ಮಾತೃ ಭೂತಕ್ಕೆ ತೃಪ್ತಿಯಾಗ ಬೇಕಾದರೆ ನಿಮಗೆ ತಲಾ ಒಂದೊಂದು ಬರೆ ತೆಗೆಯ ಬೇಕಷ್ಟೆ, ಆ ಬರೆಗಳನ್ನು ಅಂಗೀಕರಿಸಿ ನನ್ನ ತಾಯಿಗೆ ತೃಪ್ತಿ ಮಾಡಿಸುತ್ತೀರೋ? ಇಲ್ಲದೆ ರಾಯದತ್ತವಾದ ಭಂಗಾರದ ಮಾವಿನ ಹಣ್ಣುಗಳನ್ನು ನನಗೆ ಕೊಟ್ಟು ಬಿಟ್ಟು ನಿಮ್ಮದಿಯಾಗಿ ಮನೆಗೆ ಹೋಗುತ್ತೀರೋ; ಹೇಳಿರಿ; ಇಗೋ ನೋಡಿರಿ, ನನ್ನ ಮನೆಯ ತಲಬಾಗಲು ಭದ್ರವಾಗಿ ಹಾಕಿದೆ, ನೂರಾರು ಬರೆಗೋಲುಗಳು ಕಾದು ಸಿದ್ಧವಾಗಿದೆ, ನನ್ನ ಸೇವಕರು ನಡುವು ಕಟ್ಟಿದ್ದಾರೆ.

ನೀವು ಬೆನ್ನು ತೋರಿಸುವದೇ ಸಾವಕಾಶವೆಂದು ಬೆದರಿಸಿದನು. ಬ್ರಾಹ್ಮಣರೆಲ್ಲರೂ ಘಾಬರಿ ಪಟ್ಟು ಭಂಗಾರದ ಮಾವಿನ ಹಣ್ಣುಗಳನ್ನೆಲ್ಲಾ ಅವನಿಗೆ ಕೊಟ್ಟುಬಿಟ್ಟು ಪ್ರಾಣದಿಂದ ಹೊರಗೆ ಹೊರಟು ಬಂದು ಈ ವರ್ತಮಾನವನ್ನು ರಾಯನಿಗೆ ತಿಳಿಸಲು, ಆತನು ಬ್ರಾಹ್ಮರ ಗೋಳಾಟವನ್ನು ನೋಡಿ ವಿಕಟಕವಿಯನ್ನು ಕರಿಸಿ, ಹೀಗ್ಯಾಕೆ ಮಾಡಿದಿ? ಎಂದು ಕೇಳಿದನು. ಅದಕ್ಕೆ ಅವನು ಮಹಾ ಸ್ವಾಮಿ, ನನ್ನ ತಾಯಿಯ ಆಶೆಯನ್ನು ತೀರಿಸ ಬೇಕೆಂದು ಕೆಂಪಗೆ ಕಾದ ಬರೆಗೋಲನ್ನು ಈ ಸಭೆಯವರಿಗೆ ತೋರಿಸಿದ ಮಾತ್ರದಲ್ಲೇ ಅವರು ಭಯಪಟ್ಟು ಸ್ವಾಮಿಯವರು ಕೊಟ್ಟ ಫಲದಾನವನ್ನು ನನಗೆ ಅನುಗ್ರಹ ಸಹಿತವಾಗಿ ಕೊಟ್ಟರು, ನಾನೇನೂ ತಪ್ಪು ಮಾಡಲಿಲ್ಲ, ಎಂದು ಉತ್ತರಾ ಹೇಳಿದನು. ರಾಯರು ನಕ್ಕು ನೀನು ಮೊದಲೇ ಕುಚೋದ್ಯಗಾರನು, ಬ್ರಾಹ್ಮರ ಒಡವೆಯನ್ನು ಅಪಹರಿಸ ಬಾರದೆಂದು ಹೇಳಿ ಕೊಡಿಸಿಬಿಟ್ಟು, ಇವನು ಮಾಡಿದ ವಿನೋದಕ್ಕೆ ಮೆಚ್ಚಿ ಇವನಿಗೂ ಬಹಳವಾಗಿ ಬಹುಮಾನ ಕೊಟ್ಟನು. ಹೀಗೆಯೇ ಲೋಕದಲ್ಲಿ ಹಾಸ್ಯಗಾರರು ಕಾಲಕ್ಷೇಪ ಮಾಡುತ್ತಿರುವರು.

---

## 31. THE RYOT AND THE EVIL SPIRITS.

### ೩೧. ಒಕ್ಕಲಿಗನೂ ದೆವ್ವಗಳೂ.

ಒಂದು ಅಡವಿಯಲ್ಲಿ ಒಂದು ದೊಡ್ಡ ಹುಣಸೇ ಮರ ಉಂಟು. ಆ ಮರವು ಬಹಳ ದೆವ್ವಗಳಿರುವದಕ್ಕೆ ಆಸರೆಯಾಗಿ

ಇತ್ತು. ಅದನ್ನು ನೇಗಲು ತುಂಡುಗಳಿಗಾಗಿ ಕಡಿದು ಕತ್ತರಿಸಿ ತರ ಬೇಕೆಂದು ನೆನಸಿ ಕೊಡ್ಲಿಯನ್ನು ಹೆಗಲ ಮೇಲೆ ಇಟ್ಟುಕೊಂಡು ಒಬ್ಬ ಒಕ್ಕಲಿಗನು ಬಂದನು. ಹೀಗೆ ಹಾವಿನ ಮರದ ಹತ್ತಿರಕ್ಕೆ ಕೊಡ್ಲಿ ತೆಕ್ಕೊಂಡು ಬರುವವನನ್ನು ನೋಡಿ ಭಯ ಪಡುತ್ತಿರುವ ದೆವ್ವಗಳಿಗೆ ಮತ್ತು ಹೆಚ್ಚಾಗಿ ಭಯ ಹುಟ್ಟುವ ಹಾಗೆ ಅವನು ತನ್ನ ಕೈ ಕೊಡ್ಲಿಯಿಂದ ಆ ಮರದ ಬುಡದಲ್ಲಿ ಒಂದು ಪೆಟ್ಟು ಹಾಕಿದನು. ಆಗ ಆ ದೆವ್ವಗಳೆಲ್ಲಾ ಗುಂಪು ಕೂಡಿ ಬಂದು, ಅಯ್ಯಾ! ಅಪ್ಪಾ! ಕುಯ್ಯೋ! ಮೊರ್ರೋ! ಈ ಮರವನ್ನು ಯಾಕೆ ಕಡಿಯುತ್ತೀ? ನಿನಗೆ ಇದರಿಂದ ಪ್ರಯೋಜನವೇನು? ಎಂದು ಕೇಳಿದವು. ಎಳ್ಳು ಹೊಲವನ್ನು ಉಳುವ ನೇಗಲಿಗಾಗಿ ಇದನ್ನು ಕಡಿಯುತ್ತೇನೆಂದು ಒಕ್ಕಲಿಗನು ಹೇಳಲು, ಇದನ್ನು ಕಡಿಯ ಬೇಡ, ಈ ಮರ ಹೋದ ಮೇಲೆ ನಾವು ಪರದೇಶಿಗಳಾಗಿ ಹೋಗುತ್ತೇವೆ, ನಿನಗೆ ವರುಷಕ್ಕೆ ಮೂರು ಖಂಡಗ ಎಳ್ಳು ತಂದು ಕೊಡುತ್ತೇವೆ, ಈ ಮರದ ಗೋಜಿಗೆ ಬರ ಬೇಡವೆಂದು ದೆವ್ವಗಳು ಹೇಳಿದವು. ಆ ಮಾತಿಗೆ ಒಡಂಬಟ್ಟು ಒಕ್ಕಲಿಗನು ಮನೆಗೆ ಬಂದನು. ದೆವ್ವಗಳು ಎಳ್ಳನ್ನು ಕೂಡಿಸುವ ತೊಂದರೆಯಿಂದ ವ್ಯಸನ ಪಡುತ್ತಾ ಇರುವಾಗ, ಅಲ್ಲಿಗೆ ಎಲ್ಲಿಂದಲೋ ಒಂದು ಹೊಸ ದೆವ್ವ ಬಂದು ಯಾಕೆ ವ್ಯಸನ ಪಡುತ್ತೀರಿ? ಎಂದು ಅವುಗಳ ಕೇಳಿ, ಅವುಗಳು ಕಷ್ಟ ಪಡುವ ಸಂಗತಿಯನ್ನು ತಿಳುಕೊಂಡು, ಈ ಒಕ್ಕಲಿಗನಿಗೆ ಅಂಜುವದ್ಯಾಕೆ? ಅವನ ಬಿಸಾತೇನು? ಒಂದೇ ಪೆಟ್ಟನಲ್ಲಿ ಹೊಡದು ಹಾಕಿ ಬರುತ್ತೇನೆಂದು ಬಗುನಾಳೆ ಮಾತು ಕೊಚ್ಚಿ, ಆ ರಾತ್ರಿ ಈ ಒಕ್ಕಲಿಗನ ಎತ್ತಿನ

ಕೊಟ್ಟಿಗೆ ಮನೆಯ ದೂಲದ ಮೇಲೆ ಬಂದು ಕೂತುಕೊಂಡಿತು. ಆಗ ಅವನು ಕೆಲವು ಎತ್ತುಗಳಿಗೂ ದನಗಳಿಗೂ ಸ್ವಲ್ಪ ಸ್ವಲ್ಪ ಬರೆಗಳು ಹಾಕಿಸುತ್ತಾ, ಹೊಸ ದೆವ್ವವನ್ನು ಹಿಡುಕೊಂಡು ಬಾ, ಅದಕ್ಕೆ ಚನ್ನಾಗಿ ಬರೆ ಹಾಕ ಬೇಕು ಅಂದನು. ಅದು ಬಂದು ಎತ್ತಿನ ಹೆಸರಾಗಿತ್ತು. ಅದನ್ನರಿಯದೆ ಈ ಹೊಸ ದೆವ್ವವು ಪ್ರಾಣಕ್ಕೆ ಬಂತಲ್ಲಾ ಎಂದು ಭಯ ಪಟ್ಟು, ದೂಲದಿಂದ ದುಮಿಕಿ ಒಕ್ಕಲಿಗನ ಕಾಲು ಮೇಲೆ ಬಿದ್ದು, ಅಯ್ಯಾ, ಅಪ್ಪಾ, ನನ್ನ ಕಾಪಾಡೆಂದು ಬೇಡಿ ಕೊಂಡಿತು. ಒಕ್ಕಲಿಗನು ನೀನು ಯಾತಕ್ಕೆ ಬಂದಿ? ಎಂದು ಕೇಳಿದ್ದಕ್ಕೆ, ಅದು ನಿನ್ನ ಒಕ್ಕಲಾದ ದೆವ್ವಗಳು ನಿನಗೆ ಎಳ್ಳು ಬೇಕೋ ಎಣ್ಣೆ ಬೇಕೋ ಕೇಳಿ ಬಾ ಎಂದು ಕಳುಹಿಸಿದವು ಅನ್ನಲು, ಅವನು ನನಗೆ ಎಣ್ಣೆಯೇ ಬೇಕು, ಎಳ್ಳು ಬೇಡ, ಈ ಮಾತು ಹೇಳು ಹೋಗೆಂದು ಓಡಿಸಿದನು. ಒಳ್ಳೇದೆಂದು ಈ ಹೊಸದೆವ್ವವು ಹೋಗಿ ಈ ಮಾತನ್ನು ಊರು ದೆವ್ವಗಳಿಗೆ ಹೇಳಿತು. ಅವು, ಅಪ್ಪಾ, ಇದು ನೀನು ಮಾಡಿದ ಉಪಕಾರವೇ, "ಓಡ ಬೇಕೆಂದು ಮಂದು ತಿಂದು ತೂಗಿಡಿಸಿ ಬಿದ್ದಿಯಲ್ಲವೇ" ಮರ ಹತ್ತಿ ಬುಡ ಕಡದ ಹಾಗಾಯಿತು, ಎಂದು ದುಃಖ ಪಟ್ಟು, ಇನ್ನೇನು ಮಾಡೋಣ, ಸಾಯಲಾರದ ಬಡತನಕ್ಕೆ ಫಲಾಯನವೇ ನಿಕ್ಷೇಪ ಎಂದು ನಿಶ್ಚಯ ಮಾಡಿ ಆ ಮರವನ್ನು ಬಿಟ್ಟು ದಿಕ್ಕಾಪಾಲಾಗಿ ಓಡಿ ಹೋದವು.

---

## 32. ON DIFFERENCE OF RANK.

## ೩೨. ಸ್ಥಿತಿ ತಾರತಮ್ಯ

ಒಬ್ಬ ಅರಸನು ಬೇಟೆಗೆ ಹೊರಟು ಬೇಟೆ ಆಡುತ್ತಾ ಆಡುತ್ತಾ ದಾವರಗೊಂಡು ಅಡವಿಯಲ್ಲಿ ಹರಿಯುವ ಹೊಳೆಗೆ ಬಂದು ನೀರು ಕುಡಿದು ಧಡದಲ್ಲಿರುವ ಮರದ ನೆರಳಿನಲ್ಲಿ ಕೂತುಕೊಂಡನು. ಆಗ ಅವನು ಆ ಹೊಳೆಯಲ್ಲಿ ಬಲೆ ಬೀಸಿ ಮೀನು ಹಿಡಿಯುವ ಗಂಡನ ಸಂಗಡ ಮೀನುಗಳನ್ನಾದು ಬುಟ್ಟಿಗೆ ತುಂಬುತ್ತಾ ಬರುವ ಅಂಬಿಗಿತ್ತಿಯನ್ನು ಕಂಡನು. ಅವಳು ತುಂಬು ಬಸುರಿಯಾಗಿದ್ದು ಸಂಗಡಲೇ ನೀರು ಮಿಂದು ಬಂದು ಹತ್ತರ ಇದ್ದ ಈಚಲು ಚಿಗುರನ್ನು ಕಿತ್ತು ಬೇಕಾದಷ್ಟು ತಿಂದು ಮೂರು ಬಗಸೆ ನೀರು ಕುಡಿದು, ಮಗುವನ್ನೆತ್ತಿಕೊಂಡು ಗಂಡನ ಸಂಗಡ ಹೋಗುತ್ತಿದ್ದಳು. ಅದನ್ನು ನೋಡಿ ಅರಸನು ಆಶ್ಚರ್ಯದಿಂದ, ಆ ಅಂಬಿಗರವನನ್ನು ಕರದು ಅವನಿಂದ ಈ ಸಂಗತಿಯನ್ನೆಲ್ಲಾ ವಿಸ್ತಾರವಾಗಿ ತಿಳುಕೊಂಡು, ತನ್ನೊಳಗೆ ತಾನು ಇಂತೆಂದನು, ಲೋಕದಲ್ಲಿರುವ ಸ್ತ್ರೀ ಜಾತಿ ಎಲ್ಲಾ ಒಂದೇ, ಎಲ್ಲಾ ಸ್ತ್ರೀಯರಿಗೂ ಬಸುರು ಹೆರಿಗೆಗಳು ಬಂದೇ ಪ್ರಕಾರವೇ ಹೊರ್ತು ಬೇರೆ ಬೇರೆಯಾಗಿರವು, ಇಂಥಾದ್ದರಲ್ಲಿ ಈ ಅಂಬಿಗಿತ್ತಿಯು ಪ್ರಸವಿಸಿ ನೆಮ್ಮದಿಯಾಗಿರುವ ಹಾಗೆಯೇ ನಮ್ಮ ರಾಜಾಂತಃಪುರದಲ್ಲಿರುವ ಪಟ್ಟದ ರಾಣಿ ಮುಂತಾದವರು ಇರಬಾರದೋ ? ಅವರಿಗೆ ರಾಜೋಪಚಾರಗಳು ಔಷಧ ಪಥ್ಯಗಳು ಪಂಡಿತರಾದ ವೈದ್ಯರ ವಿಚಾರಣೆ ಇವೆಲ್ಲಾ ನಡೆಯುವದರಿಂದ ಅವರಿಗೆ ಆಯಾಸವೂ ರಾಜಸ

ವ್ರೂ ಉಂಟು, ಇದರಿಂದಲೇ ಹೆತ್ತ ಮೂರು ತಿಂಗಳ ಪರಿಯಂತರವೂ ಹೊರಗೆ ಹೊರಡದೆ ಕೊಠಡಿಗಳಲ್ಲಿಯೇ ಇರುತ್ತಾರೆ, ಇನ್ನು ಮೇಲೆ ಇದಕ್ಕೆ ತಕ್ಕ ಬಂದೋಬಸ್ತು ಮಾಡಿಸಬೇಕೆಂದು ಅರಮನೆಗೆ ಬಂದನು. ಆಗ ಪಟ್ಟದ ರಾಣಿ ಗರ್ಭಿಣಿಯಾಗಿ ಏಳೆಂಟು ತಿಂಗಳಾಗಿತ್ತು. ತನ್ನ ಯೋಚನೆ ನೆರವೇರುವದಕ್ಕೆ ಇದೇ ಸಮಯವೆಂದು ಈ ಅರಸನು ಪಟ್ಟದ ರಾಣಿಯ ದಾಸಿಗಳನ್ನೂ ಪಂಡಿತರನ್ನೂ ಕರಿಸಿ ಗರ್ಭಿಣಿಯಾದ ರಾಣಿಗೆ ಹೆಚ್ಚು ಗಟ್ಲೆ ಉಪಚಾರಗಳನ್ನು ಮಾಡ ಬೇಡಿರಿ, ಔಷಧಗಳು ಕೊಡ ಬೇಡಿರಿ, ಪಥ್ಯ ವಿಡ ಬೇಡಿರಿ, ಎಂದು ಕಟ್ಲೆ ಮಾಡಿ, ಹೊಳೇ ದಡದಲ್ಲಿ ನೀರುಮಿಂದ ಅಂಬಿಗಿತ್ತಿಗೆ ಈಚಲು ಚಿಗುರು ಔಷಧವಾಯಿತು, ಅವಳು ಕುಡಿದ ಮೂರು ಬಗಸೆ ನೀರು ಪಥ್ಯವಾಯಿತು, ಇಂಥಾವಳು ಮಗು ಹೆತ್ತು ನೆಮ್ಮದಿಯಾಗಿರಲಿಲ್ಲವೋ? ಸ್ತ್ರೀಯರಲ್ಲಿ ಭೇದ ಉಂಟೋ? ಎಲ್ಲಾ ಒಂದೇ, ಇವರಿಗೆ ಮಾತ್ರ ಇಂಥಾ ಉಪಚಾರಗಳು ಯಾತಕ್ಕೆ? ಏನೂ ಕೆಲಸವಿಲ್ಲ, ಏನಾಗುತ್ತದೆಯೋ ನೋಡೋಣ, ಎಂದು ತಿಳಿಸಿ ಅಂತಃಪುರದವರನ್ನು ಕಳುಹಿಸಿ ಬಿಟ್ಟನು. ಆಗ ಪಟ್ಟದ ರಾಣಿಯು ಈ ಸಂಗತಿಯನ್ನೆಲ್ಲಾ ತಿಳಿದು ಈ ಅವಿವೇಕ ಶಿರೋಮಣಿಗೆ ವಿವೇಕ ಉಂಟು ಮಾಡ ಬೇಕೆಂದು ನೆನಸಿ, ಅರಮನೆಯಲ್ಲಿರುವ ಶೃಂಗಾರ ವನದ ಚಾಕರಿಯವರನ್ನೆಲ್ಲಾ ಕರಸಿ, ಈ ಹೊತ್ತು ಮೊದಲುಗೊಂಡು ಹುವ್ವಿನ ಗಿಡಗಳಿಗೆ ನೀರು ಹಾಕ ಬೇಡಿರಿ, ಸಣ್ಣ ಗಿಡಗಳ ಪಾತಿಗಳಿಗೆ ಕೊತ್ತಿ ಗೊಬ್ಬರ ಹಾಕ ಬೇಡಿರಿ, ಕಳೆ ಕೀಳ ಬೇಡಿರಿ, ಅದರ ವಿಚಾರಣೆ ನೀವೇನೂ ಮಾಡದೆ ಸುಮ್ಮನೆ ಇರಿ, ಎಂದು ಖಂಡಿತವಾಗಿ ಆ

ಜ್ಞಾಪಿಸಿದಳು. ಅವರು ಅದೇಪ್ರಕಾರ ಸುಮ್ಮನೆ ಇದ್ದರು. ತರುವಾಯ ಮೂರು ನಾಲ್ಕು ದಿವಸದ ಮೇಲೆ ಆ ಉದ್ಯಾನ ವನಕ್ಕೆ ಅರಸು ವಿಹಾರಾರ್ಥವಾಗಿ ಬಂದು ಅಲ್ಲಿ ಗಿಡಗಳೆಲ್ಲಾ ನೀರಿಲ್ಲದೆ ಬಾಡಿ ಒಣಗಿ ಪಾತಿಗಳಲ್ಲಿ ಕಳೆ ಕಸ ಕಡ್ಡಿ ತುಂಬಿ ನೋಡುವದಕ್ಕೆ ಚನ್ನಾಗಿ ಇಲ್ಲದೆ ವ್ಯಸನ ಪಡುವ ಹಾಗೆ ಇದ್ದದ್ದನ್ನು ಕಂಡು ಯಾತಕ್ಕೆ ಹೀಗಾಯಿತೆಂದು ವಿಚಾರಿಸಿದನು. ರಾಣಿಯ ಅಪ್ಪಣೆ ಪ್ರಕಾರವೆಂದು ಚಾಕರರು ಹೇಳಿದರು. ಆ ಮಾತನ್ನು ಕೇಳಿ ಅರಸನು ರಾಣಿಯ ಬಳಿಗೆ ಹೋಗಿ ಯಾತಕ್ಕೆ ಹೀಗೆ ಮಾಡಿಸಿದಿ ಎಂದು ಕೇಳಲು, ಆಕೆ ಎಲೈ ಅವಿವೇಕ ಪುಂಜವೇ, ಅಡವಿ ಗಿಡಗಳಿಗೆ ಆರೇಕೆ ಮಾಡುವವರ್ಯಾರು, ಆ ಗಿಡಗಳೂ ಒಂದೇ, ಈ ಗಿಡಗಳೂ ಒಂದೇ, ಏನೂ ಭೇದವಿಲ್ಲ, ಇದಕ್ಯಾತಕ್ಕೆ ಆರೇಕೆ ? ಎಂದು ದೃಷ್ಟಾಂತವಾಗಿ ಹೇಳಿದಳು. ರಾಯನು ನಾಚಿಕೆ ಪಟ್ಟು ರಾಣಿಗೆ ಯಥಾಪ್ರಕಾರ ಉಪಚಾರ ಮಾಡುವದಕ್ಕೆ ಅಪ್ಪಣೆ ಕೊಟ್ಟನು. ಹಾಗೆಯೇ ಶೃಂಗಾರ ವನದ ಆರೇಕೆಗೆ ರಾಣಿಯ ಅಪ್ಪಣೆ ಆಯಿತು. ಹೀಗೆ ತಾರತಮ್ಯಗಳರಿತು ನಡಿಸ ಬೇಕು.

---

## 33. THE KING AND THE PARROT.

### ೩೩. ಅರಸನೂ ಗಿಣಿಯೂ.

ಒಬ್ಬ ಅರಸನು ಒಂದು ಗಿಣಿಯನ್ನು ಸಾಕಿದನು. ಅದು ಒಂದು ದಿವಸ ದೇವಲೋಕದ ಗಿಣಿಗಳೊಡನೆ ಸ್ವರ್ಗಕ್ಕೆ ಹಾರಿ ಹೋಗಿ ಅಲ್ಲಿದ್ದ ಮಾವಿನ ಹಣ್ಣನ್ನು ತಿಂದು ಬೀಜವನ್ನು

ಬಿಸಾಡದೆ ತಂದು ಅರಸನಿಗೆ ಕೊಟ್ಟು, ಈ ಬೀಜದಿಂದ ಹುಟ್ಟಿದ ಮರದಲ್ಲಿ ಬಿಟ್ಟ ಫಲವನ್ನು ತಿಂದವರು ಮುದುಕರಾಗಿದ್ದರೂ ಪ್ರಾಯದವರಾಗುವರೆಂದು ಹೇಳಿತು. ಅದೇ ಪ್ರಕಾರ ಅರಸು ಆ ಬೀಜವನ್ನು ತನ್ನ ಸ್ವಂತ ತೋಟದಲ್ಲಿ ನೆಡಿಸಿ ನೊಳತ ಕೂಡಲೇ ಆ ಗಿಡವನ್ನು ಚನ್ನಾಗಿ ಆರೇಕೆ ಮಾಡಿಸಿದನು. ಅದು ಬೆಳದು ಮರವಾಗಿ ಫಲಕ್ಕೆ ಬಂದು ಚಿಗುರು, ಹೂವು ಹೀಚು ಕಾಯಿ ದೋರೆಹಣ್ಣು ಈ ಪ್ರಕಾರ ಕ್ರಮವಾಗಿ ಫಲ ಹಿಡಿದಿರುವ ಸಮಯದಲ್ಲಿ, ಆ ಹಣ್ಣುಗಳಲ್ಲಿ ಒಂದು ಹಣ್ಣು ನಾಡು ಗಿಣಿಯಿಂದ ಸ್ವಲ್ಪ ತಿನ್ನಲ್ಪಟ್ಟು ಮರದಲ್ಲೇ ಇರುವಾಗ, ಒಂದು ಗರುಡ ಪಕ್ಷಿಯು ವಿಷ ಸರ್ಪವನ್ನು ಕಚ್ಚಿ ಹಿಡಿದುಕೊಂಡು ಅಂತರಿಕ್ಷದಲ್ಲಿ ಹಾರಿ ಹೋಗುತ್ತಿರಲು, ನೇತಾಡುವ ಸರ್ಪದ ಬಾಯಿಂದ ತೊಟಕ್ಕುವ ವಿಷದ ಬೊಟ್ಟು ದೈವ ಗತಿಯಿಂದ ಆ ಗಿಣಿ ಕಚ್ಚಿದ ಮಾವಿನ ಹಣ್ಣಿನ ಘಾಯದಲ್ಲಿ ಬಿದ್ದದ್ದರಿಂದ ಆ ಹಣ್ಣು ವಿಷವಾಯಿತು. ಅದು ಕೆಲವು ದಿವಸದ ಮೇಲೆ ತೊಟ್ಟು ಮಾಗಿ ಕೆಳಕ್ಕೆ ಬೀಳಲು, ಅದನ್ನು ಪ್ರಥಮ ಫಲವೆಂದು ತೋಟದವರು ಅರಸನಿಗೆ ತಂದು ಒಪ್ಪಿಸಿದರು. ಆಗ ಅರಸನ ಗುರುವು ಗ್ರಹಚಾರ ಸಾಮಾನ್ಯದಿಂದ ಬಂದು ಅರಸನ ಬಳಿಯಲ್ಲಿ ಕೂತನು. ಈ ಪ್ರಥಮ ಫಲವು ಗುರುಗಳಿಗೆ ಯೋಗ್ಯವಾದ್ದೆಂದು ಅರಸನು ವಿನಯದಿಂದ ಕೊಟ್ಟನು. ಸಂಗಡಲೇ ಆ ಗುರುವು ಅದನ್ನು ಭಕ್ಷಿಸಿ ಕೂತವನು ಕೂತ ಹಾಗೆಯೇ ದೀರ್ಘ ನಿದ್ರೆ ಹೋದನು. ಹೀಗೆ ಗುರು ಹಿಂಸೆಯನ್ನು ಮಾಡಿದೆನೆಂದು ಅರಸನು ಬಹಳ ದುಃಖಪಟ್ಟು ಗುರು ದ್ರೋಹಿಗೆ ತಕ್ಷಣ ಮರಣವೇ ಶಿಕ್ಷೆ ಎಂದು ತನ್ನ

ನ್ನು ತಾನೇ ಕೊಂದು ಕೊಳ್ಳುವದಕ್ಕೆ ಸಿದ್ಧನಾಗಿ, ವಿಷದ ಬೀಜವನ್ನು ತಂದು ಕೊಟ್ಟ ಸ್ವಾಮಿ ದ್ರೋಹಿ ಗಿಣಿಯನ್ನು ಕೊಂದು ಹಾಕುವದೇ ಮೊದಲನೇ ಕೆಲಸವೆಂದು, ಪಂಜರದ ಗಿಣಿಯನ್ನು ಹಿಡಿತರಿಸಿ, ತಾನೇ ಅದರ ಕೊರಳ ಕಿವಿಚಿ, ದ್ರೋಹಿಯೇ ಸಾಯಿ ಎಂದು ಬಿಸಾಟನು. ಅದು ದೇವಲೋಕದ ಅಮೃತ ಫಲವನ್ನು ತಿಂದಿರುವ ಕಾರಣ ಸಾಯದೆ ಮೇಲಕ್ಕೆ ಹಾರಿ ಅಂತರಿಕ್ಷದಲ್ಲಿ ನಿಂತು, ಎಲೈ ರಾಯನೇ, ನಾನು ದ್ರೋಹಿಯಲ್ಲ, ಘಾಬರಿ ಬೀಳ ಕೆಲಸವಿಲ್ಲ, ತಿಳಿಯದ ಹಾಗೆ ಬಂದ ಅಪಾಯವನ್ನು ತಕ್ಕ ಉಪಾಯದಿಂದ ಪರಿಹರಿಸ ಬೇಕು, ನಾನು ನಿನಗೆ ಬೀಜ ತಂದು ಕೊಟ್ಟದ್ದಕ್ಕೆ ನಿನ್ನಿಂದ ಕೊಲ್ಲಲ್ಪಟ್ಟಾಗ್ಯೂ ಆ ಫಲವನ್ನು ತಿಂದಿರುವ ಕಾರಣ ಸಾಯದೆ ಬದಿಕಿ ಇದ್ದೇನೆ, ಇಂಥಾ ಕೆಲಸವನ್ನು ನಿಧಾನಿಸಿ ನೋಡ ಬೇಕು, ನಾನು ಈಗ ಹೇಳುವ ಪ್ರಕಾರಕ್ಕೆ ಅದೇ ಮರದಿಂದ ಮತ್ತೊಂದು ಹಣ್ಣನ್ನು ತರಿಸಿ ಆ ಹಣ್ಣಿನ ರಸವನ್ನು ಈ ಬಿದ್ದಿರುವ ಗುರುವಿನ ಬಾಯೊಳಗೆ ಬಿಡಿಸಿ ನೋಡೆಂದಿತು. ಅರಸನು ಮಹದಾಶ್ಚರ್ಯವನ್ನು ಹೊಂದಿ ಹಲ್ಲು ಕಿಟ್ಟಿಕೊಂಡು ಹೋಗಿರುವ ಗುರುವಿನ ಬಾಯನ್ನು ಬೀಗದ ಕೈ ಹಾಕಿ ಮಾಟಿ ತೆರದು, ಆ ಹಣ್ಣಿನ ರಸವನ್ನು ಬಿಡಿಸಿದನು. ಆಗ ಆ ದಿವ್ಯ ರಸವು ಗಂಟಲ್ಲಿ ಜಾರಿ ಮೆಲ್ಲ ಮೆಲ್ಲನೆ ನಾಭಿ ಸ್ಥಾನವನ್ನು ಹೋಗಿ ಸೇರಲು, ಗುರುವು ಬದಿಕಿ ಕಣ್ಣು ತೆರದು ನಿದ್ದೆ ಹೋದವನು ಎದ್ದ ಹಾಗೆ ಎದ್ದನು. ಆಗ ರಾಯನು ಪುನಃ ಗಿಣಿಯನ್ನು ಕರದು ನನ್ನ ಜೀವ ರತ್ನವೇ, ನನ್ನ ಭಾಗ್ಯದ ಗಿಣಿಯೇ, ನನ್ನ ಅಪರಾಧವನ್ನು ಕ್ಷಮಿಸು, ನನ್ನ ಕಾಪಾಡು, ಎಂದು ಆದರಿಸಿ ಲಾಲಿಸಿ,

ಯಾಕೆ ಹೀಂಗೆ ಗುರುವಿಗೆ ಉಪದ್ರವಾಯಿತು? ಆಲೋಚಿಸಿ ಹೇಳೆನ್ನಲು, ಗಿಣಿಯು ದೂರ ದೃಷ್ಟಿಯಿಂದ ತಿಳಿದು ಆ ಬಂದು ಫಲ ಮಾತ್ರ ವಿಷವಾದ ಸಂಗತಿಯನ್ನು ಹೇಳಿತು. ಅದ ಕೇಳಿ ಪರಮ ಸಂತೋಷ ಭರಿತನಾಗಿ ಆ ಗಿಣಿಯೊಡನೆ ಅರಸನು ಬಹು ಕಾಲ ರಾಜ್ಯವಾಳಿದನು.

---

## 31. THE TEACHER AND THE TIGER

## ೩೧. ಉಪಾಧ್ಯನೂ ಹುಲಿಯೂ.

ಧನಪಾಲಶೆಟ್ಟಿ ಎಂಬ ಸಾಹುಕಾರನಿಗೆ ಶೀಲವಂತೆ ಎಂಬ ಮಗಳು ಹುಟ್ಟಿದಳು. ಆ ಕೂಸಿನ ಜಾತಕವು ರಾಜಯೋಗ ಸಂಪನ್ನವಾಗಿ ಇತ್ತು. ಅಂಥಾ ಮಗಳನ್ನು ಪಡೆದ ಸಾಹುಕಾರನು ಸಂತೋಷದಿಂದ ದಿನ ದಿನವು ಬಾಲಚಂದ್ರನ ಹಾಗೆ ಬೆಳೆಯುತ್ತಿರುವ ಮಗಳಿಗೆ ಐದು ವರುಷ ತುಂಬಲು, ಅವಳಿಗೆ ವಿದ್ಯಾಭ್ಯಾಸ ಮಾಡಿಸಬೇಕೆಂದು ನೆನಸಿ, ಬುದ್ಧಿವಂತನಾದ ಉಪಾಧ್ಯನಿಗೆ ಹತ್ತು ವರಹ ಸಂಬಳ ಮಾಡಿ ಈ ಮಗುವಿಗೆ ಚೆನ್ನಾಗಿ ವಿದ್ಯೆಯು ಕಲಿಸಿ ಕೀರ್ತಿ ಪಡೆಯಿರೆಂದು ಉಪಾಧ್ಯನ ವಶಕ್ಕೆ ಮಗಳನ್ನು ಒಪ್ಪಿಸಿದನು. ಆ ಹುಡಿಗಿ ಮಹಾ ಸೌಂದರ್ಯವುಳ್ಳವಳಾದಾಗ್ಯೂ ಶೀಲವಂತೆ ಎಂಬ ತನ್ನ ಹೆಸರಿಗೆ ತಕ್ಕ ಒಳ್ಳೇ ಸ್ವಭಾವವೂ ಗುಣವೂ ಉಳ್ಳವಳಾಗಿದ್ದಳು. ಆದ್ದರಿಂದ ಅವಳು ವಿದ್ಯಾ ಗುರುವಿಗೆ ತಕ್ಕ ಸೇವೆಯನ್ನು ವಿಶ್ವಾಸದಿಂದ ಮಾಡುತ್ತಾ ಬಂದು ಸಕಲ ವಿದ್ಯಾ ಪಾರಂಗತಳಾದಳು. ಹೀಗೆ ಹತ್ತು ಹನ್ನೊಂ

ದು ವರ್ಷ ತುಂಬಲು, ತನ್ನ ಮಗಳಿಗೆ ಋತುಕಾಲವೆಂದು ತಿಳಿದು ಆ ಸಾವುಕಾರನು ಮಗಳನ್ನು ಹತ್ರಕ್ಕೆ ಕರೆದು, ಅಮ್ಮಾ ಮಗುವೇ, ನಿನಗೆ ಎಲ್ಲಾ ವಿದ್ಯೆಯೂ ಬಂತು, ಗುರುದಕ್ಷಿಣೆ ಕೊಟ್ಟು, ಉಪಾಧ್ಯನ ಕೈಲಿ ಅಪ್ಪಣೆ ತೆಕ್ಕೊಂಡು ಮನೆಯಲ್ಲೇ ಇರ ಬೇಕು, ಇನ್ನು ಮೇಲೆ ಮಠಕ್ಕೆ ಹೋಗ ಕೆಲಸವಿಲ್ಲವೆಂದು ನೇಮಿಸಿದನು. ತಂದೆ ಹೇಳಿದ ಮೇರಿಗೆ ಗುರುವಿಗೆ ದಕ್ಷಿಣೆ ಕೊಟ್ಟು, ಅಪ್ಪಣೆ ತೆಗದು ಕೊಳ್ಳುವದಕ್ಕೆ ಈ ಕನ್ನಿಕೆ ತಟ್ಟೆ ತುಂಬ ರತ್ನಗಳನ್ನು ತುಂಬಿಕೊಂಡು ಉಪಾಧ್ಯನ ಬಳಿಗೆ ಬಂದು ಮುಂದಿಟ್ಟು, ನಮಸ್ಕರಿಸಿ, ತಂದೆ ಹೇಳಿದ ಮಾತನ್ನು ತಿಳಿಸಿ, ಅಪ್ಪಣೆ ಆಗ ಬೇಕು, ಮನೆಗೆ ಹೋಗುತ್ತೇನೆ, ಅಂದಳು. ಅದಕ್ಕೆ ಆ ಉಪಾಧ್ಯನು ಮನಶ್ಚಾಪಲ್ಯದಿಂದ ಹಿಂದು ಮುಂದು ನೋಡದೆ, ಎಲೇ ಹೆಣ್ಣೇ, ಈ ರತ್ನಗಳಿಗೋಸ್ಕರ ನಿನಗೆ ನಾನು ವಿದ್ಯೆ ಹೇಳಲಿಲ್ಲ, ಕನ್ಯಾರತ್ನವಾದ ನಿನ್ನನ್ನು ಮದುವೆಯಾಗ ಬೇಕೆಂದು ನಾನಾ ಪಾಡುಗಳು ಪಟ್ಟೆನು, ನಾನು ಮುದಕನಲ್ಲ, ಕುರೂಪಿಯಲ್ಲ, ನನ್ನ ಆಶೆಯನ್ನು ವ್ಯರ್ಥ ಮಾಡಿದರೆ ನಿನಗೆ ಒಳ್ಳೇದಾಗುವದಿಲ್ಲವೆಂದು ಹೇಳಿನು. ಆಗ ಆ ಸ್ತ್ರೀಯು ನೀವು ನನಗೆ ಗುರುವು, ನಾನು ನಿಮಗೆ ಶಿಷ್ಯಳು, ನೀವು ನನ್ನನ್ನು ನಿಮ್ಮ ಮಗಳಂತೆ ಭಾವಿಸ ಬೇಕು, ಅನ್ಯಥಾ ಯೋಚಿಸ ಬಾರದು, ಎಂದು ಅಲ್ಲಿ ನಿಲ್ಲದೆ ಜಾಗ್ರತೆಯಾಗಿ ಮನೆಗೆ ಬಂದಳು. ಉಪಾಧ್ಯನು ದುರಾಲೋಚನೆಯಿಂದ ಅವಳನ್ನು ಗ್ರಹಿಸ ಬೇಕೆಂದು ಇದ್ದನು. ತರುವಾಯ ಕೆಲವು ದಿವಸಗಳ ಮೇಲೆ ಆ ಹೆಣ್ಣು ಋತುಮತಿಯಾದಳೆಂಬ ವರ್ತಮಾನವನ್ನು ಕೇಳಿ, ಉ

ಪಾಧ್ಯನು ಸಾವುಕಾರನ ಬಳಿಗೆ ಬಂದು, ಅಯ್ಯಾ, ಇನ್ನೂ ಬದಿಕಿದ್ದೀಯಾ ? ಎಂದು ವ್ಯಸನದಿಂದ ಮಾತನಾಡಿಸಲು, ಅದೇನೆಂದು ಕೇಳಿದ ಸಾವುಕಾರನಿಗೆ ಪ್ರತ್ಯುತ್ತರವಾಗಿ ಉಪಾಧ್ಯನು ನಿನ್ನ ಮಗಳು ಮೈ ನೆರದ ಮುಹೂರ್ತ ದೋಷದಿಂದ ನಿನಗೆ ದೊಡ್ಡ ಕೇಡು ಸಂಭವಿಸುವದು, ಅದನ್ನು ತಪ್ಪಿಸಿ ಕೊಳ್ಳಬೇಕಾದರೆ ಅವಳು ಸ್ನಾನ ಮಾಡಿದ ಮರುದಿನವೇ ಅಲಂಕಾರ ಮಾಡಿ ಅವಳನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿ ಮುಚ್ಚಿ ಹರಿಯುವ ಹೊಳೆಯಲ್ಲಿ ಬಿಟ್ಟು ಬಿಟ್ಟು ಸೌಖ್ಯವಾಗಿ ಇರೆಂದನು. ಆ ಮೂಢನು ಆ ಮಾತು ನಿಜವೆಂದು ಅದೇಪ್ರಕಾರ ಮಾಡಿಸಿದನು. ಆ ಪೆಟ್ಟಿಗೆ ಹೊಳೆಯಲ್ಲಿ ತೇಲಿ ಹೋಗುತ್ತಿರುವಾಗ ಬೇಟೆಯಾಡುತ್ತಿದ್ದ ಒಬ್ಬ ಅರಸನು ನದೀ ತೀರಕ್ಕೆ ಬಂದು, ತೇಲಿ ಹೋಗುವ ಪೆಟ್ಟಿಗೆಯನ್ನು ತಡದು ದಡಕೆ ತೆಗಿಸಿ, ಬೀಗವನ್ನು ಮುರಿಸಿ ಮುಚ್ಚಳವನ್ನು ತೆರದು ಒಳಗೆ ಅಲಂಕಾರ ಸಂಪನ್ನೆಯಾಗಿರುವ ಸುಂದರ ಸ್ತ್ರೀಯನ್ನು ನೋಡಿ ಸಂತೋಷಪಟ್ಟು ನಡದ ವೃತ್ತಾಂತವನ್ನೆಲ್ಲಾ ಅವಳಿಂದ ಕೇಳಿ, ತಾನು ಬೇಟೆಯಲ್ಲಿ ಹಿಡುಕೊಂಡು ಬಂದಿರುವ ಪಡ್ಡೆ ಪುಲಿಯನ್ನು ಆ ಪೆಟ್ಟಿಗೆಯಲ್ಲಿ ಹಾಕಿಸಿ, ಮುಚ್ಚಳವನ್ನು ಬೀಗದೊಡನೆ ಮೊದಲಿನ ಹಾಗೆ ಬಿಗಿದು ಹೊಳೆಯಲ್ಲಿ ತೇಲ ಬಿಟ್ಟು, ಶೀಲವಂತೆಯೊಡನೆ ತನ್ನ ಪಟ್ಟಣಕ್ಕೆ ಬಂದು ಅವಳನ್ನು ಮದುವೆಯಾಗಿ ಸುಖದಿಂದಿದ್ದನು. ಇಲ್ಲಿ ಈ ಚಪಲ ಚಿತ್ತನಾದ ಉಪಾಧ್ಯನು ಬರುವ ಪೆಟ್ಟಿಗೆಗೆ ಎದುರೆದುರು ನೋಡುತ್ತಾ, ಊರಿಗೆ ದೂರವಾಗಿ ನದೀ ತೀರದಲ್ಲಿ ಕಾದು ಕೊಂಡಿದ್ದು ಪೆಟ್ಟಿಗೆಯನ್ನು ಕಂಡು, ಮತ್ತಾರಿಗೂ ತಿಳಿಸದೆ ಬಹು ಪ್ರಯತ್ನದಿಂದ ತಾನೊಬ್ಬನೇ ದಡಕ್ಕೆ ಸಾಗಿ

ಸಿ ಕೊಂಡು ಬಂದು ತಾನಿದ್ದ ಊರಿಗೆ ಅವಳನ್ನು ಕರಕೊಂಡು ಹೋದರೆ ಪ್ರಾಣಕ್ಕೆ ಬರುವದು, ಬೇರೊಂದು ಊರಿಗೆ ಹೋಗಿ ಮದುವೆ ಮಾಡಿಕೊಂಡು ಕೆಲವು ದಿವಸಗಳ ಮೇಲೆ ತನ್ನೂರಿಗೆ ಹೋಗ ಬಹುದೆಂದು ನಿಶ್ಚಯಿಸಿ, ತನ್ನ ಆಲೋಚನೆ ಕೈಕೂಡಿ ಬಂತೆಂದು, ಬೇಗಾ ಹುರಿದು ಪೆಟ್ಟಿಗೆಯ ಮುಚ್ಚಳವನ್ನು ತೆರೆದನು. ಆಗ "ಹಸಿದ ಹುಲಿಗೆ ಹಾರುವಯ್ಯ ಸಿಕ್ಕಿದ" ಎಂಬ ಸಾಮತಿಗೆ ಸರಿಯಾಗಿ, ಪಟ್ಟೆ ಹುಲಿಯು ಮಹಾ ಕೋಪದಿಂದೆದ್ದು ಈ ದುಷ್ಟನ ಕೊರಳ ಹಿಡಿದು ಮೇಲಕ್ಕೆತ್ತಿ ನೆಲಕ್ಕೆ ಕುಕ್ಕಿ ಕುಗ್ಗಿಸಿ ರಕ್ತವನ್ನೆಲ್ಲಾ ಹೀರಿ ಮಾಂಸವನ್ನು ತಿಂದು ಬಿಸಾಟು ಹೋಯಿತು. ಅದ್ದರಿಂದ ಮೋಸಗಾರರಿಗೆ ನಾಶವೇ ಸಂಭವಿಸುವದು.

---

## 55. RELIGIOUS VARIATIONS.

### ೫೫. ಮತ ದ್ವೇಷ.

ಲೋಕದಲ್ಲಿ ಶೈವ ವೈಷ್ಣವ ಮತಗಳಿಗೆ ಅಂತರಂಗವನ್ನು ವಿಚಾರಿಸಿ ನೋಡಿದರೆ ಅನ್ಯೋನ್ಯ ಸ್ನೇಹವಿದ್ದಾಗ್ಯೂ ಆಯಾ ಮತಸ್ಥರು ತಮ್ಮ ತಮ್ಮ ಮತವನ್ನು ವೃದ್ಧಿ ಹೊಂದಿಸುವದಕ್ಕೋಸ್ಕರ ಹೊರತರಕ್ಕೆ ವ್ಯಾಜ್ಯ ಮಾಡುತ್ತಿರುವರು. ಇದಕ್ಕೊಂದು ಚಿಕ್ಕ ಕಥೆ ಉಂಟು, ಅದೇನಂದರೆ, ಚೋಳ ದೇಶದ ಕಾವೇರೀ ತೀರದಲ್ಲಿ ಶ್ರೀರಂಗ ಜಂಬುಕೇಶ್ವರಗಳೆಂಬ ಎರಡು ಸ್ಥಳಗಳುಂಟು. ಶ್ರೀರಂಗದಲ್ಲಿ ವೈಷ್ಣವರೂ ಜಂಬುಕೇಶ್ವರದಲ್ಲಿ ಶೈವರೂ ಇರುವರು. ಅವರಿಬ್ಬರಿಗೂ ಆಗಿಂದಾಗ್ಯೆ ಹರಿ

ಹೆಚ್ಚು ಹರ ಹೆಚ್ಚು ಎಂಬ ವ್ಯಾಜ್ಯವು ಸಾಧಾರಣವಾಗಿ ನಡಿಯುತ್ತಿರುವದು. ಹೀಗಿರುವಲ್ಲಿ ಒಬ್ಬ ವೈಷ್ಣವನು ನಿತ್ಯವೂ ಜಂಬುಕೇಶ್ವರಕ್ಕೆ ಉಪಾದಾನಕ್ಕೆ ಬರುತ್ತಿರುವನು. ಅವನನ್ನು ನೋಡಿ ಶೈವರು ವೈಷ್ಣವ ಕಾಗಿ ನೆಲದ ಮೇಲೆ ನಡಿಯುತ್ತದೆ. ಮೇಲಕ್ಕೆ ಹಾರಿ ಹೋಗ ಬಾರದೋ ಎಂದು ಅನ್ಯಾಪದೇಶವಾಗಿ ನಿಂದಿಸುತ್ತಾ ಇರುವರು. ಅದನ್ನು ಕೇಳುತ್ತಲೇ ಅವನಿಗೆ ಕೋಪ ಬಂದಾಗ್ಯೂ ಆ ಮಾತಿಗೆ ಪ್ರತ್ಯುತ್ತರ ಕೊಟ್ಟರೆ ಉಪಾದಾನಾ ಹಾಕರೆಂದು ಅವನು ಸುಮ್ಮನಿರುವನು. ಒಂದು ದಿವಸ ಆ ಈಶ್ವರ ದೇವಸ್ಥಾನದ ಗೋಪುರದ ಮೇಲೆ ಒಂದು ಕಾಗಿ ಬಂದು ಕುಳಿತು ತನ್ನ ಕೊಕ್ಕನ್ನು ಉಜ್ಜಿಕೊಳ್ಳುತ್ತಾ ಇತ್ತು. ಅದನ್ನು ಈ ಉಪಾದಾನದ ವೈಷ್ಣವನು ಬೀದಿಯಲ್ಲಿ ಬರುವಾಗ ಕಂಡು ಎಲೈ ಗೋಪುರದ ಮೇಲಿರುವ ಶ್ರೀರಂಗದ ವೈಷ್ಣವ ಕಾಗಿಯೇ, ನಾನು ಭಿಕ್ಷಾ ಎತ್ತಿ ಎತ್ತಿ ಈ ಊರಿನವರನ್ನು ಬಡವರು ಮಾಡುತ್ತೇನೆ, ನೀನು ನಿನ್ನ ಮೂಗಿನ ಕೊನೆಯಿಂದ ಈ ಗೋಪುರ ಪ್ರಾಕಾರ ದೇವಸ್ಥಾನವೆಲ್ಲಾ ಇಡಿದು ಕೆಡವಿ ಬಿಟ್ಟು ಕಾವೇರಿಯಲ್ಲಿ ಸ್ನಾನ ಮಾಡಿ ಶ್ರೀರಂಗಕ್ಕೆ ಹೋಗು ಎಂದು ಘಟ್ಟಿಯಾಗಿ ಕೂಗಿದನು. ಹೀಗೆ ಮನಸ್ಸಿನಲ್ಲಿರುವ ದ್ವೇಷವು ಎಂದಿಗಾದರು ಹೊರಗೆ ಬರುವದು.

---

## 36. THE LAMP AND THE FOOL.

## ೩೬. ದೀಪವೂ ಧಡ್ಡನೂ.

ಒಬ್ಬ ದಡ್ಡನಾದ ದರಿದ್ರನು ತನ್ನ ಅಕ್ಕನನ್ನೂ ಭಾವನನ್ನೂ ನೋಡಲಿಕ್ಕೆ ಅವರು ಇರುವ ಊರಿಗೆ ಬಂದನು. ಆ ಭಾವನು ನೆಂಮದಿ ಪರನಾಗಿ ದೊಡ್ಡ ಮನೆಯನ್ನು ಕಟ್ಟಿಕೊಂಡು ಅನ್ನ ವಸ್ತ್ರಕ್ಕೆ ಕಡಮೆ ಇಲ್ಲದೆ ಸೌಖ್ಯವಾಗಿದ್ದನು. ಅವನ ಮನೆಗೆ ಬಂದ ಈ ಧಡ್ಡನಿಗೆ ಬಡತನ ಬ್ರಂಹೇತಿ ಈ ಎರಡೂ ಹೊಂದಿರುವವು. ಹೀಗಿರುವವನ ಗುರುತು ಹಿಡಿದು ಭಾವನು ಮೈದನಿಗೆ ತಕ್ಕ ಮರ್ಯಾದೆ ಮಾಡಿ, ಯೋಗಕ್ಷೇಮಾ ವಿಚಾರಿಸಿ, ದಾಕ್ಷಿಣ್ಯದಿಂದ ಆ ರಾತ್ರಿ ಒಂದೇ ಪಂಕ್ತಿಯಲ್ಲಿ ಭೋಜನ ಮಾಡುತ್ತಿರುವ ಸಮಯದಲ್ಲಿ, ಆ ಮೂಢನು ಗೂಡಿನಲ್ಲಿ ಉರಿಯುವ ದೀಪದಿಂದ ಮನೆಯೆಲ್ಲಾ ಬೆಳಕಾಗಿರುವದನ್ನು ನೋಡಿ, ಭಾವಾ ಇದೇನು? ಒಳ್ಳೇ ಬೆಳಕು ಒಳ್ಳೇ ಬೆಳಕು ಅಂದನು. ಅದಕ್ಕೆ ಅವನು ಈ ಬೆಳಕಿನ ವಸ್ತು ನಿಮ್ಮ ಊರಲ್ಲಿ ಇಲ್ಲವ್ರೋ? ನೀನರಿಯೆಯೋ? ಎಂದು ಕೇಳಿದನು. ಮೈದನು ನಮ್ಮ ಹಳ್ಳಿ ಗಾಡಿನಲ್ಲಿ ಸೂರ್ಯನ ಬೆಳಕು ಒಂದಲ್ಲದೆ ಎರಡನೇದು ಇಲ್ಲ ಅಂದನು. ಭಾವನು ಹಳ್ಳಿಯವರಿಗೆ ರಾತ್ರಿ ಭೋಜನ ಉಂಟೋ? ಅಂದನು. ಮೈದನು ಉಂಟು, ಆದರೆ ಏನು? ಅಂದನು. ಭಾವನು ಕತ್ತಲೊಳಗೆ ಊಟ ಹ್ಯಾಗೆ ಮಾಡುತ್ತೀರಿ? ಅಂದನು. ಮೈದನು ಕೈಗೂ ಬಾಯಿಗೂ ಕತ್ತಲು ಉಂಟೋ? ಎಂದು ಹೇಳಿದನು. ಭಾವನು ಕತ್ತಲಲ್ಲಿ ತಿನ್ನುವವರಿಗೂ ಹುಟ್ಟು ಕುರುಡರಿಗೂ ಭೇದವಿಲ್ಲವೆಂದು ಅಪಹಾಸ್ಯ ಮಾಡಿ, ಈ

ಬೆಳಕಿನ ವಸ್ತು ಬಹಳ ಬೆಲೆಯುಳ್ಳದ್ದು, ದ್ವೀಪಾಂತರದಿಂದ ಹಡಗಿನ ಮೇಲೆ ಬರುತ್ತದೆ, ಇದರ ಹೆಸರು ಸೂರ್ಯನ ಕೂಸು ಎಂದು ನುಡಿದನು. ಭೋಜನವಾದ ಮೇಲೆ ಮನೆಯುವರೆಲ್ಲಾ ಅಲ್ಲಲ್ಲಿ ಮಲಗಿ ನಿದ್ದೆ ಹೋಗುತ್ತಿರುವಾಗ, ಈ ಮೂಢನು ತನ್ನ ಊರಿಗೆ ಸೂರ್ಯನ ಕೂಸನ್ನು ತೆಕ್ಕೊಂಡು ಹೋಗ ಬೇಕೆಂದು ಉರಿಯುವ ದೀಪವನ್ನು ಆ ಮನೆಗೆ ಸ್ವಲ್ಪ ದೂರವಾಗಿರುವ ಹುಲ್ಲು ಮನೇ ಸೂರಿನಲ್ಲಿ ಬಚ್ಚಿಟ್ಟನು. ಸಂಗಡಲೇ ಹುಲ್ಲು ಮನೆ ಹತ್ತಿಕೊಂಡು ಧಗಧಗನೆ ಉರಿಯಿತು. ಸುತ್ತು ಮುತ್ತು ನೆರೆಯುವರೆಲ್ಲಾ ಬಂದು ಉರಿಯುವ ಬೆಂಕಿಯನ್ನು ಆರಿಸುತ್ತಾ ಇರುವಾಗ, ಈ ಮೂಢನು ಕೂಸು ದೊಡ್ಡದಾಗಲಿ, ಯಾಕೆ ಹೊಡಿಯುತ್ತೀರಿ? ಎಂದು ಕೈ ಚಪ್ಪಾಳೆ ತಟ್ಟಿ ಕುಣಿದಾಡಿದನು. ಯಾವ ಕೂಸೆಂದು ಭಾವನು ಕೇಳಿದ್ದಕ್ಕೆ, ಮೈದನು ನೀನು ಹೇಳಿದ ಸೂರ್ಯನ ಕೂಸು, ಅದನ್ನು ನನ್ನ ಊರಿಗೆ ತೆಕ್ಕೊಂಡು ಹೋಗ ಬೇಕೆಂದು ಹುಲ್ಲು ಮನೇ ಸೂರಿನಲ್ಲಿ ಬಚ್ಚಿಟ್ಟೆನು, ಕೂಡ್ಲೇ ದೊಡ್ಡದಾಯಿತು, ಶಾಬಾಸ್ ಶಾಬಾಸ್ ಎಂದನು. ಆಗ ಭಾವನು ಮೈದನ ಪೆದ್ದತನವನ್ನು ತಿಳಿದು ಅವನಿಗೆ ತಕ್ಕ ಬಂದೋಬಸ್ತು ಮಾಡಿ, ದುಷ್ಟನನ್ನು ದೂರ ಹೊರಡಿಸ ಬೇಕೆಂದು ಹಿರಿಯರು ಹೇಳಿದ ಮಾತಿನ ಮೇರಿಗೆ ಆ ಮೂಢನನ್ನು ಮರು ದಿವಸವೇ ಮನೆಯಿಂದ ಹೊರಡಿಸಿ ಬಿಟ್ಟನು. ಅದಕ್ಕೆ ಅವನ ಅಕ್ಕ ದುಃಖ ಪಟ್ಟಳು. ಅವಳನ್ನು ನೋಡಿ ಭಾವನು ನಿನ್ನ ತಮ್ಮನು ಎಮ್ಮೇ ಕೋಣನು, ನೀನು ಎಮ್ಮೆಯಾಗಿ ದುಃಖ ಪಡ ಬೇಡವೆಂದು ಸಮಾಧಾನಿಸಿದನು. ಹೀಗೆ ಬುದ್ಧಿ ಹೀನರು ಮಾನ ಕೆಡಿಸಿಕೊಳ್ಳುವರು.

---

## 37. THE VIZIER BUDDHI SAGARA AND THE EMPEROR OF DELHI.

### ೩೭. ಬುದ್ಧಿಸಾಗರನೆಂಬ ಮಂತ್ರಿಯೂ ಡಿಲ್ಲಿ ಪಾದಷಹಾನೂ.

ಶೂರಸೇನನೆಂಬ ಅರಸನ ಬಳೀಲಿ ಬುದ್ಧಿಸಾಗರನೆಂಬ ಮಂತ್ರಿ ಇದ್ದನು. ಆತನು ತನ್ನ ಪರಾಕ್ರಮದಿಂದಲೂ ಮಂತ್ರಿಯ ಬುದ್ಧಿ ಬಲದಿಂದಲೂ ಪರ ರಾಯರಿಗೆ ಭಯಂಕರನಾಗಿ ತಾನಾಳುವ ರಾಜ್ಯವು ಕೊಂಚವಾಗಿದ್ದಾಗ್ಯೂ ಬೇರೆ ಬೇರೆ ದೊಡ್ಡ ರಾಜ್ಯಗಳನ್ನಾಳುವ ಅರಸುಗಳ ದೊಡ್ಡ ಸಭೆಗಳಲ್ಲಿ ತನ್ನ ಕೀರ್ತಿಯನ್ನು ಹೊಗಳಿಸಿ ಕೊಳ್ಳುತ್ತಾ ಇರುವನು. ಕೀರ್ತಿವಂತನೂ ಪರಾಕ್ರಮ ಶಾಲಿಯೂ ಆದ ಆ ರಾಯನನ್ನು ಯುದ್ಧದಲ್ಲಿ ಜಯಿಸ ಕೂಡದೆಂಬ ಮಾತು ಪ್ರಸಿದ್ಧವಾಗಿರುವದು. ಅನ್ಯರ ಉಪಾಯಗಳೂ ಛದ್ಮನೆಗಳೂ ಮಂತ್ರಿಯ ಬುದ್ಧಿ ಬಲದಿಂದ ರಾಯನ ಮೇಲೆ ಎಷ್ಟು ಮಾತ್ರವೂ ನಡಿಯಲಾರದೆ ಈತನ ರಾಜ್ಯವು ಶಂಕಾತಂಕವಿಲ್ಲದೆ ಇರುವದು. ಈ ರಾಯನಿರುವ ಪಟ್ಣದ ಕೋಟೆಗೆ ನಿಶ್ಶಂಕ ರಾಯನ ಕೋಟೆ ಎಂಬ ಹೆಸರುಂಟಾಯಿತು. ನಿಶ್ಶಂಕರಾಯ ಅಂದರೆ ಶತ್ರುಗಳ ಭಯ ಲೇಶಮಾತ್ರವೂ ಇಲ್ಲದಿರುವ ರಾಯನೆಂಬ ಅರ್ಥ. ಈ ಹೆಸರು ಮಾತ್ರವೇ ಅಲ್ಲ, ರಾಜ್ಯಭಾರದ ಬಿಂಕವೂ ಹಾಗೆಯೇ ಇರುವದು. ಆ ಕಾಲದಲ್ಲಿ ಡಿಲ್ಲಿ ಪಾದಷಹಾ ಎಂಬ ಅಶ್ವಪತಿಯು ಬಹಳ ಪ್ರಸಿದ್ಧನಾಗಿ ಲೆಖ್ಖವಿಲ್ಲದ ಕುದುರೇ ಫೌಜು ಉಳ್ಳವನಾಗಿದ್ದನು. ಆತನ ಫೌಜು ಗಣಿತಿಯಾಗ ಬೇಕಾದರೆ, ದೊಡ್ಡ ದೊಡ್ಡ ಬಿದುರು ಬಂಬುಗಳು ಒಂದು ಹರದಾರಿ ವರಿಗೂ ನೆಲದ ಮೇಲೆ ದಟ್ಟವಾಗಿ ಹಾಕಿಸಿ, ಕುದುರೆಗಳನ್ನು ಆ ಬಂಬುಗಳ ಮೇಲೆ ಇತ್ತ್ಲಕ

ಡೆಯಿಂದ ಅತ್ತಕಡೆಗೆ ದೌಡು ಬಿಡಿಸಿ ಆ ಬಂಬುಗಳೆಲ್ಲಾ ಪುಡಿ ಪುಡಿಯಾಗಿ ನೆಲದ ಧೂಳಿನಲ್ಲಿ ಕಲತು ಹೋಗಲು, ಅದೇ ಗುರುತು ನೋಡಿಕೊಂಡು ಗಣಿತ ಆಯಿತೆಂದು ನಿಶ್ಚೈಸುವನು. ಅಷ್ಟು ಫೌಜನ್ನು ಇಟ್ಟುಕೊಂಡು ಅನೇಕಾವರ್ತಿ ಅಲ್ಲಲ್ಲಿ ಯುದ್ಧಗಳು ಮಾಡಿ ಬಹು ಜಯುಗಳನ್ನು ಪಡದ ಪಾದಷಹಾ ಈ ರಾಯನನ್ನು ಬಂದಾವರ್ತಿ ಯಾವರೂ ಜಯಿಲಾರದೆ ವ್ಯಸನ ಪಟ್ಟು ತನ್ನ ಮಂತ್ರಿ ಗಳೊಡನೆ ಆಲೋಚಿಸಿ, ಉಪಾಯುದಿಂದ ಆ ಬುದ್ಧಿ ಸಾಗರ ಮಂತ್ರಿಯುನ್ನು ಕರಿಸಿ ಕೈದಿಸಲ್ಲಿಟ್ಟರೆ ಆ ರಾಯನನ್ನು ತಾನು ಜಯಿಸಬಹುದೆಂದು ನಿಶ್ಚೈಸಿ, ರಾಯನೊಡನೆ ಸ್ನೇಹವನ್ನು ಬೆಳಸಿ ಸಂಬಿಕೆ ಉಂಟು ಮಾಡಿಕೊಂಡು, ಕೆಲವು ಕಾಲದ ಮೇಲೆ ನಿಮ್ಮ ಮಂತ್ರಿಯನ್ನು ನೋಡ ಬೇಕೆಂಬ ಅಪೇಕ್ಷೆ ನಮಗೆ ಬಹಳ ಉಂಟು, ದಯುಮಾಡಿ ಕಳುಹಿಸಿ ಕೊಟ್ಟಲ್ಲಿ ಕಂಡು ಸಂತೋಷಿಸುವೆವು, ಎಂದು ರಾಯನಿಗೆ ಬರೆದನು. ರಾಯನು ಕಳುಹಿಸಲಿಕ್ಕೆ ಅನುಮಾನಿಸುತ್ತಿರಲು, ಧೈರ್ಯಶಾಲಿಯಾದ ಮಂತ್ರಿಯು ಅರಸನನ್ನು ಸಮಾಧಾನ ಪಡಿಸಿ ಅಪ್ಪಣೆ ತೆಗದುಕೊಂಡು ತಕ್ಕ ಸನ್ನಾಹದಿಂದ ಹೊರಟು ಡಿಲ್ಲಿಗೆ ಹೋಗಿ ಸೇರಿದನು. ಅದನ್ನು ಪಾದಷಹಾ ಕೇಳಿ ದೊಡ್ಡ ದರಬಾರು ಮಾಡಿ, ಧೂಳಿ ದರ್ಶನದಲ್ಲೇ ಅಂದರೆ ಮೊದಲನೇ ಸರ್ತಿ ಕಾಣುವದರಲ್ಲೇ ಆ ಮಂತ್ರಿಯು ಬುದ್ಧಿಯುನ್ನು ಅರಿಯು ಬೇಕೆಂದು, ತನ್ನ ಮಂತ್ರಿಗಳೊಳಗೆ ಒಬ್ಬನನ್ನು ತಾನು ಕೂತುಕೊಳ್ಳುವ ಸ್ಥಳದಲ್ಲಿ ಕುಳ್ಳಿರಿಸಿ ತಾನಾ ಮಂತ್ರಿಯು ಸ್ಥಳದಲ್ಲಿ ಕೂತುಕೊಂಡು ಬುದ್ಧಿ ಸಾಗರ ಮಂತ್ರಿಯನ್ನು ದರಬಾರಿಗೆ ಕರಿಸಿದನು. ಆತನು ಬಹು ದಿಟ್ಟದಿಂದ ದರಬಾರಿಗೆ ಬಂದು ಎಲ್ಲಿ ಪಾದಷಹಾ ಕುಳಿತು ಇದ್ದಾನೋ ಅಲ್ಲೇ ನಿಂತು

ನಜರು ಮಾಡಿದನು. ಆಗ ಪಾದಷಹಾ ಎಲೈ ಮಂತ್ರಿ ಶ್ರೇಷ್ಠನೇ, ನನ್ನ ಗುರುತು ನಿನಗೆ ಹ್ಯಾಗೆ ತಿಳಿಯಿತು ಎಂದು ಪ್ರಶ್ನೆ ಮಾಡಲು, ಬುದ್ಧಿಸಾಗರನು ಪ್ರಭುವೇ, ದರಬಾರಿನಲ್ಲಿ ಎಲ್ಲಾ ಜನಗಳ ದೃಷ್ಟಿಯೂ ನಿಮ್ಮನ್ನೇ ಆಶ್ರಯಿಸಿ ಇರುವವರಿಂದ ನನ್ನ ದೃಷ್ಟಿಯೂ ನಿಮ್ಮನ್ನೇ ಹೊಂದಿತು. ಅಯಸ್ಕಾಂತ ಶಿಲೆಯು ಕಡೆಗೆ ಸೂಜಿ ತಿರಗದೆ ಇರುವದೋ? ಕ್ಷಮಿಸ ಬೇಕೆಂದು, ಪಾದಷಹಾನ ಅಪ್ಪಣೆ ಪ್ರಕಾರ ಮಂತ್ರಿ ಸ್ಥಾನದಲ್ಲಿ ಕುಳಿತು ಕೊಂಡನು. ಆಗ ಪಾದಷಹಾ ಆಶ್ಚರ್ಯ ಪಟ್ಟು ಇಂಥಾ ಮಂತ್ರಿಯ ಬುದ್ಧಿ ಬಲದಿಂದಲೇ ನಿಶ್ಶಂಕ ರಾಯನ ಕೋಟೆಯಲ್ಲಿ ಶೂರಸೇನ ರಾಯನು ಪರರಾಯರಿಗೆ ಅಸಾಧ್ಯನಾಗಿದ್ದಾನೆ ಎಂದು ತನ್ನಲ್ಲಿ ತಾನೇ ಸಂತೋಷಿಸಿ, ರಾಯ ಮಂತ್ರಿಯನ್ನು ನೋಡಿ, ರಾಯನಿಗೆ ಸೈನ್ಯವೆಷ್ಟು ಇದೆ? ಎನ್ನಲು, ಒಂದೇ ಮನಸ್ಸುಳ್ಳದ್ದಾಗಿದೆ ಎಂತ ಬುದ್ಧಿಸಾಗರನು ಅಂದನು. ಪಾದಷಹಾ ಖಜಾನೆ ಎಷ್ಟದೆ? ಅನ್ನಲು, ಮಂತ್ರಿ ಶೀಮೆ ಅಬಾದಾಗಿದೆ ಅಂದನು. ಪಾದಷಹಾ ಬುಟ್ಟಿಯಲ್ಲಿ ಶಿಕ್ಕಿದ ಹಾವು ಬಿಟ್ಟು ಹೊರ್ತು ಹೋಗುವದೋ? ಅನ್ನಲು, ಮಂತ್ರಿ ದಿಟ್ಟವಾದ ಘಾಳಿಯಿಂದ ಪೆಟ್ಟಿಗೆಯ ಮುಚ್ಚಳ ತೆರೆಯಲ್ಪಡುವದು ಅಂದನು. ಪಾದಷಹಾ ಕಾಲಿಲ್ಲದ ಹಾವು ಕೋಲಿನ ಪೆಟ್ಟಿಗೆ ಶಿಕ್ಕದೋ? ಅನ್ನಲು, ಮಂತ್ರಿ ಕಾಲಿಗೆ ಸುತ್ತಿದ ಹಾವು ಕಚ್ಚದೆ ಬಿಡದು ಅಂದನು. ಪಾದಷಹಾ ಹಾವು ಕಚ್ಚಿ ಬರೀ ಬಾಯಿ ಅನ್ನಲು, ಮಂತ್ರಿ ಬರೀ ಬಾಯಿ ಆದರೂ ಬಾಯಲ್ಲಿ ನೊರೆ ಬರ ಮಾಡುವದು ಅಂದನು. ಪಾದಷಹಾ ಈ ಪ್ರಕಾರ ಸರಿಯಾದ ಉತ್ತರಗಳನ್ನು ಕೊಟ್ಟು ರಾಯ ಮಂತ್ರಿಯನ್ನು ಮೆಚ್ಚಿ ಅವನಿಗೆ ಭಾರಿ ಖಿಲ್ಲತ್ತು ಕೊಟ್ಟು ಅವನನ್ನು

ಬಹಳ ಮರ್ಯಾದೆಯಿಂದ ಪುನಃ ರಾಯನ ಸಂಸ್ಥಾನಕ್ಕೆ ಕಳು ಹಿಸಿ ಕೊಟ್ಟನು. ಇದೇ ಮಹಾ ಮಂತ್ರಿಯ ಗುಣವು.

---

## 38. THE FOOL CATCHING FISH.

### ೩೮. ಧಡ್ಡನು ಮೀನು ಹಿಡಿದ್ದು.

ಒಬ್ಬ ಒಕ್ಕಲಿಗನಿಗೆ ಒಬ್ಬ ಮಗನಿದ್ದನು. ಆ ಹುಡುಗನು ಯಾವ ಕೆಲಸವೂ ಮಾಡದೆ ಇದ್ದಾಗ್ಯೂ ತಿನ್ನುವದೂ ತಿರುಗು ವದೂ ಈ ಎರಡನ್ನು ಮಾತ್ರ ಮರೆಯದೆ ಮಾಡುವನು. ಓ ದು ಬರಹ ಎಂಬ ಸಮಾಚಾರವೇ ಇಲ್ಲ. ಅವನಿಗೂ ಹತ್ತು ಹದಿನಾರು ವರುಷವಾಯಿತು. ಹೀಗಿರುವ ಮಗನನ್ನು ನೋಡಿ ತಂದೆ ಒಂದು ದಿವಸ ಎಲಾ ಹೈದಾ, ಸುಮ್ಮನೆ ತಿಂದು ತಿರುಗು ವದಕ್ಕೆ ಬದಲು ಕೆರೆಯಲ್ಲಿ ಮೀನಾದರೂ ಹಿಡುಕೊಂಡು ಬರ ಬಾರದೇ? ಅಂದನು. ಅವನು ಹಾಗೇ ಆಗಲೆಂದು ತನ್ನ ತಂದೆಯ ಆರಂಬದ ಗದ್ದೆಗೆ ಆಧಾರವಾದ ಅಣೆಕಟ್ಟಿನ ಹತ್ರಕ್ಕೆ ಹೋಗಿ ತುಂಬು ನೀರಿನಲ್ಲಿ ಮೀನು ಹಿಡಿಯ ಕೂಡದೆಂದು ಆ ಕಟ್ಟೆಯನ್ನು ನಾಲ್ಕೈದು ಕಡೆ ಅಗದು ಕಿತ್ತು ಬಿಟ್ಟು ಅಣೆಯ ನೀರೆಲ್ಲಾ ಹೊರಟು ಹೋದ ಮೇಲೆ ತಳದಲ್ಲಿ ತೆಳ್ಳಗೆ ನಿಂತ ಕೆಸರಿನಲ್ಲಿ ಇಳಿದು ಕೈಯಿಂದ ಹುಡಿಕಿ ಹುಡಿಕಿ ಶಿಕ್ಕಿದ ಅಯಿದಾರು ಮೀನುಗಳನ್ನು ಹಿಡಿಯಲ್ಲಿ ಹಿಡುಕೊಂಡು ಬಂದು, ಇ ಗೋ ಅಪ್ಪಾ, ತಂದೆನೆಂದು ತಂದೆಯ ಮುಂದೆ ಮಡಗಿದನು. ಅದನ್ನು ನೋಡಿ, ತಂದೆಯು ಶಾಬಾಸು, ಶಾಬಾಸು, ಶಾನೆ ವಾಸಿ

ಈ ಕೆಲಸವಾದರು ಮಾಡಿದಿಯಲ್ಲಾ, ಇನ್ನು ಮೇಲೆ ಭಯವಿಲ್ಲ, ಎಂದು ಮೆಚ್ಚಿ, ಇಷ್ಟೊತ್ತು ಏನು ಆಯಿತು? ಎಂದು ಕೇಳಲು, ಹುಡುಗನು ಅಪ್ಪಾ, ನಾನು ಆಗಲೇ ಬರುವೆ, ನಮ್ಮ ಅಣೇ ನೀರೆಲ್ಲಾ ಹೊರಟು ಹೋಗಿ ತಳದ ಕೆಸರು ಕಾಣಿಸುವದಕ್ಕೆ ತಡವಾಯಿತು, ಅಂದನು. ಅದಕ್ಕೆ ತಂದೆ ಎಲಾ ಪಾಪಿ! ಅಣೇನೀರೆಲ್ಲಾ ಹೋಯಿತೋ ಅಂದನು. ಮಗನು ಹೌದಪ್ಪಾ, ನೀರೆಲ್ಲಾ ಹೋಯಿತು ಕೆಸರು ಇನ್ನೂ ಅದೆ ಅನ್ನಲು, ಗದ್ದೆಯ ಪೈರೆಲ್ಲಾ ನಷ್ಟವಾಗಿ, ಹೋಯಿತಲ್ಲಾ! ಎಂದು ತಂದೆ ದುಃಖ ಪಟ್ಟನು. ಹೀಗೆ ದಡ್ಡರಿಂದ ನಷ್ಟ ಉಂಟಾಗುವದು.

---

## 39. THE PRINCE AND THE VIZIER.

### ೩೯. ರಾಜ ಕುಮಾರನೂ ಮಂತ್ರಿಯೂ.

ಪರಾಕ್ರಮಶಾಲಿಯಾದ ಒಬ್ಬ ಅರಸನುಂಟು. ಆತನು ಅನೇಕ ರಾಜ್ಯಗಳನ್ನು ಜಯಿಸಿ, ದ್ವೀಪಾಂತರಗಳಿಗೆ ಪ್ರವೇಶಿಸಿ ಅಲ್ಲಿ ನಡದ ಅಘೋರ ಯುದ್ಧರಂಗದಲ್ಲಿ ಮಡಿದನು. ಇದು ಪ್ರತಾಪಉಳ್ಳ ಸೂರ್ಯನು ಲೋಕಾಂಧಕಾರವನ್ನು ಪ್ರಕಾಶದಿಂದ ಜಯಿಸಿ ಅಸ್ತಮಿಸುವ ಹಾಗೆ ಆಯಿತು. ಸೂರ್ಯನ ತೇಜಸ್ಸು ರಾತ್ರಿಯಲ್ಲಿ ಅಗ್ನಿಗೆ ಉಂಟಾಗಿರುವ ಹಾಗೆ ತಂದೆಯ ರಾಜ್ಯವು ಸ್ವಭಾವ ಸಿದ್ಧವಾಗಿ ಮಗನಿಗೆ ಚಿಕ್ಕಂದಿನಲ್ಲೇ ಬಂತು. ತಂದೆಯಿಂದ ಜಯಿಸಲ್ಪಟ್ಟದ್ದ ಅರಸುಗಳೆಲ್ಲರೂ ಈ ರಾಜಕುಮಾರನಿಗೆ ವಿಧೇಯರಾಗಿ ಇದ್ದರು. ಆದು ಮಂತ್ರಿಗಳ ಬುದ್ಧಿ

ಸಾಹಸ ಸಾಮರ್ಥ್ಯ ಬಲದಿಂದ ಉಂಟಾಗಿತ್ತು. ಮೇಲಾಗಿ ಈ ಶ್ರೇಷ್ಠರಾದ ಮಂತ್ರಿಗಳಿಂದ ರಾಜ ಕುಮಾರನಿಗೆ ರಾಜ ನೀತಿಯ ಮಾರ್ಗ ಚೆನ್ನಾಗಿ ತಿಳಿಸಲ್ಪಟ್ಟಿತ್ತು. ಅಂಥಾ ತಿದ್ದು ಪಾಟು ಹೊಂದಿದ ರಾಜಕುಮಾರನು ಬಾಲಕನಾಗಿದ್ದಾಗ್ಯೂ, ಮಂತ್ರಿಗಳ ಮನೋಭಾವವನ್ನು ತಿಳಿಯ ಬೇಕೆಂದು ನೆನಸಿ, ರಾಜ ಸಿಂಹಾಸನದ ಮೇಲೆ ಕುಳಿತು, ಇಷ್ಟರಾದ ಅಷ್ಟ ಮಂತ್ರಿ ಗಳೊಡನೆ ಕೇಳಿದ್ದೇನಂದರೆ, ಮಹಾ ಪ್ರಧಾನಿಗಳಿರಾ, ನಮ್ಮ ರಾ ಜ್ಯದಲ್ಲಿರುವ ಪ್ರಜೆಗಳಿಂದ ಅರಮನೆಗೆ ಬರತಕ್ಕ ಹೊಲ ಗ ದ್ದೆ ತೋಟ ಮುಂತಾದ ಜಮೀನು ಬಾಬಿನ ಕಂದಾಯ, ಮನೆ ಕಂದಾಯ, ಮರಗಳ ಗುತ್ತಿಗೆ, ಸುಂಕ ಮುಂತಾದ ತೆರಿಗೆ ಇ ವುಗಳೆಲ್ಲಾ ಪೂರ್ವದ ಕಾಲಿನ ಪ್ರಕಾರಕ್ಕೆ ವರುಷಂ ಪ್ರತಿ ವಸೂಲಾಗಿ ಬರುತ್ತದೋ ಇಲ್ಲವೋ? ಅಂದನು. ಅವರು ವರುಷಂ ಪ್ರತಿ ವರುಷವೂ ಮಾಮೂಲು ಮೇರೆಗೆ ನಿಗದಿಯಾ ದ ತೆರಿಗೇ ಹಣ ಅಡ್ಡಿ ಇಲ್ಲದೆ ಹಸ್ತಾಂತ್ರಕ್ಕೆ ವಸೂಲಾಗಿ ಬ ರುತ್ತದೆ ಅಂದರು. ರಾಜ ಕುಮಾರನು ಹೀಗೆ ಬರುವ ತೆರಿಗೆ ಯ ಹಣಕ್ಕಾಗಿ ವರ್ಷ ವರ್ಷ ಪ್ರಜೆಗಳನ್ನು ನಾವು ಯಾ ತಕ್ಕೆ ತೊಂದರೆ ಮಾಡ ಬೇಕು, ಇದು ಮೊದಲು ಇಪ್ಪತ್ತು ನಾಲ್ಕು ವರುಷದ ಕಂದಾಯವನ್ನು ಒಂದೇ ಸರ್ತಿ ಒಟ್ಟಾಗಿ ಬರ ಮಾಡಿದರೆ, ಅರಮನೇ ಬೊಕ್ಕಸದಲ್ಲಿ ಬಹಳ ದ್ರವ್ಯ ಇರು ತ್ತದೆ, ರೈತರಿಗೂ ತೊಂದರೆ ಇಲ್ಲದೆ ನೆಮ್ಮದಿ ಆಗುತ್ತದೆ, ಅಂ ದನು. ಮಂತ್ರಿಗಳು, ಪ್ರಭುವೇ, ಹಾಂಗೆ ಮಾಡ ಕೂಡದು, ಯಾಕಂದರೆ, ೧. ಪ್ರಜೆಗಳಿಂದ ಆಯಾ ವರುಷದ ತೆರಿಗೆಯನ್ನು ಆಯಾ ವರುಷ ವಸೂಲು ಮಾಡುವ ಪೂರ್ವ ಪದ್ಧತಿ ತಪ್ಪುತ್ತ

ದೆ; ೨. ಭೂಮಿಯು ಪೈರಿನಿಂದ ಬದುಕುವ ರೈತರನ್ನು ಬೆಳೆಯುಂಟಾದ ವರುಷಕ್ಕೂ ಬೆಳೆ ಇಲ್ಲದ ವರುಷಕ್ಕೂ ಸಹ ಒಟ್ಟಾಗಿ ಕಂದಾಯ ಕೊಡ ಹೇಳಿ ಕೇಳುವದು ನ್ಯಾಯ ವಿರೋಧ; ೩. ವಿದ್ಯಾಶಾಲೆಯ ಹುಡುಗರನ್ನು ಆಗಾಗ್ಯೆ ಪರಿಕ್ಷಿಸದೆ ಶಿಕ್ಷಿಸದೆ ಬಿಟ್ಟರೆ ಉಪಾಧ್ಯಾಯನು ಕಲಿಸಿದ್ದನ್ನು ಅವರು ಹ್ಯಾಗೆ ಮರೆಯುವರೋ ಹಾಗೆಯೇ ವರುಷಂ ಪ್ರತಿಯೂ ಸರಕಾರದ ವಿಚಾರಣೆ ಇಲ್ಲದಿದ್ದರೆ ಪ್ರಜೆಗಳು ತಮ್ಮ ಒಡೆಯನನ್ನು ಮರೆಯುವರು; ೪. ಹಣಗಾರರಾದ ರೈತರು ಇಪ್ಪತ್ತುನಾಲ್ಕು ವರುಷದ ತೆರಿಗೆಯನ್ನು ಒಂದೇ ವರುಷದಲ್ಲಿ ಕೊಟ್ಟರೂ ಕೊಟ್ಟಾರು. ಬಡವರು ಬಗ್ಗರಿಂದ ಆ ಮೇರಿಗೆ ಹೊಡದು ಒಡದು ವಸೂಲು ಮಾಡಿದರೆ, ಅವರು ನಿಭಾಯಿಸಲಾರರು; ೫. ಒಂದೂರಿಗೆ ಒಬ್ಬರಿಬ್ಬರು ನೆಮ್ಮದಿ ಪರರು, ಕಡಿಮೆಯುವರೆಲ್ಲರೂ ಬಡವರು; ಈ ಬಡವರಾದ ರೈತರು ಈ ದಂಡಾ ತೆತ್ತು ಓಡಿ ಹೋದರೆ ಆ ಊರಿನ ಭೂಮಿ ಎಲ್ಲಾ ಪಾಳುಬಿದ್ದು ಸರಕಾರಕ್ಕೆ ನಷ್ಟ ಸಂಭವಿಸುವದು ; ೬. ಇಷ್ಟಕ್ಕೂ ರೈತರನ್ನೆಲ್ಲಾ ಕರಿಸಿ ಇಪ್ಪತ್ತು ನಾಲ್ಕು ವರುಷದ ಕಂದಾಯವನ್ನು ಒಟ್ಟಾಗಿ ಕೊಡಿರೆಂದು ಕೇಳಿದರೆ, ಇಪ್ಪತ್ತು ನಾಲ್ಕು ವರುಷದ ಫಲವನ್ನು ಈಗಲೇ ಧೊರೆಗಳು ನಮಗೆ ಉಂಟು ಮಾಡಿ ಕೊಟ್ಟರೆ ನಾವು ಕಂದಾಯಾ ಕೊಟ್ಟೇವೆಂದು ಅವರು ಹೇಳಿದಲ್ಲಿ ಆ ಮಾತಿಗೆ ಉತ್ತರವಿಲ್ಲದೆ ಹೋಗುವದು; ೭. ರಾಜ್ಯದ ಕಂದಾಯವೆಲ್ಲಾ ಒಟ್ಟಾಗಿ ಅರಮನೇ ಬೊಕ್ಕಸಕ್ಕೆ ಸೇರಿದ ತರುವಾಯ ಸೈನ್ಯಕ್ಕೆಲ್ಲಾ ಇಪ್ಪತ್ತು ನಾಲ್ಕು ವರುಷದ ಸಂಬಳವನ್ನು ಒಂದೇ ಗಂಟಾಗಿ ಕೊಡಬೇಕಾಗಿ ಅರಮನೇ ಹಸ್ತಾಂತ್ರವು ಯಥಾಪ್ರಕಾರ ಉಳಿಯು

ಪದೇ ಹೊರ್ತು ಹೆಚ್ಚದು; ಎಂಬದಾಗಿ ಹೇಳಿದ ತರುವಾಯು, ಎಂಟನೇಯವನಾದ ಮುಖ್ಯ ಮಂತ್ರಿಯು ೮. ಮಹಾ ರಾಯನೇ, ನನ್ನ ಬಿನ್ನಹವನ್ನು ಚಿತ್ತಕ್ಕೆ ತರಬೇಕು, ಹಾಲು ಕರೆಯು ವ ಹಸುಗಳನ್ನು ಚನ್ನಾಗಿ ಮೇಯಿಸಿದರೆ, ಅವು ಪ್ರತಿ ದಿನವೂ ಕೊಡುವ ಹಾಲು ಮುಂತಾದ ಹಯನಿಂದಲೂ, ಅವುಗಳ ಹೊಟ್ಟೆ ಯಲ್ಲಿ ಹುಟ್ಟುವ ಕರಗಳಿಂದಲೂ, ಮಂದೆಯ ಯಜಮಾನನು ಐಶ್ವರ್ಯವನ್ನು ಹೊಂದುವನು, ದನಗಳನ್ನು ಕಾಪಾಡಿ ಕ್ರಮ ದಿಂದ ಹಾಲು ಕರಕೊಳ್ಳದೆ ಬಂದೇಸರ್ತಿ ಕರೆಯ ಬೇಕೆಂದು ಹಾಲು ತುಂಬಿದ ಕೆಚ್ಚಲುಗಳನ್ನು ಕೊಯಿಸಿದರೆ ನಷ್ಟ ಉಂಟಾ ಗುವ ಹಾಗೆಯೇ ಪೂರ್ವ ಪದ್ಧತಿಯನ್ನು ತಪ್ಪಿಸಿದರೆ ನಷ್ಟ ಉಂಟಾಗುವದು, ಪ್ರಜೆಗಳಿಗೆ ಕೊಟ್ಟಿರುವ ಕಾಲಿನ ಪದ್ಧತಿ ಯ ಮೇರೆಗೆ ಆಯಾ ವರುಷದ ತೆರಿಗೆಯನ್ನು ಕಿಸ್ತು ಬಂದೀ ಪ್ರಕಾರ ವಸೂಲಾಗುವಂತೆ ಅಪ್ಪಣೆ ದಯಪಾಲಿಸ ಬೇಕೇ ಹೊರ್ತು ಇಪ್ಪತ್ತು ನಾಲ್ಕು ವರುಷದ ಕಂದಾಯವನ್ನು ಒಟ್ಟಾ ಗಿ ಕೊಡ ಬೇಕೆಂದು ರೈತರನ್ನು ತೊಂದರೆ ಪಡಿಸ ಕೂಡದು, ಸರ್ವಜ್ಞ ಚಿತ್ತ, ಪ್ರಜೆಗಳನ್ನು ಸಂತೋಷ ಪಡಿಸುವದೇ ರಾಜ ಧರ್ಮ, ಪ್ರಜೆಗಳಿಂದಲೇ ರಾಜ್ಯ, ರಾಜ್ಯದಿಂದಲೇ ರಾಯನು, ರಾಯನೇ ಸತ್ಯ, ರಾಯನೇ ಧರ್ಮ, ರಾಯನೇ ಸಕಲ ವರ್ಣ ಗಳಿಗೂ ರಕ್ಷಕನು, ಮತ್ತೂ ಎಲ್ಲಾ ಮನುಷ್ಯರಿಗೂ ತಾಯಿ ತಂ ದೆಯ ಹಾಗೆ ಪ್ರೀತಿ ಪಡಿಸುವವನು ರಾಯನು ಹೊರ್ತು ಮತ್ತೊ ಬ್ಬರಿಲ್ಲ, ಮಕ್ಕಳ ವಿಷಯವಾಗಿ ತಾಯಿ ತಂದೆಗಳು ಏನಾದರು ಬಂದು ಅನ್ಯಾಯ ನಡಿಸಿದರೆ ಅದನ್ನು ವಿಚಾರಿಸಿ ತಿದ್ದಿ ಕಾಪಾ ಡುವ ಧರ್ಮವು ರಾಯನಿಗೆ ಉಂಟು, ರಾಯನ ಕೋಪವನ್ನು

ತಾಯಿ ತಂದೆಗಳು ಶಾಂತ ಪಡಿಸಲಾರರು, ರಾಜಾಧಿರಾಜನಿಗೆ ಪ್ರಜೆಗಳ ಪರಿ ಪಾಲಿಸುವ ವಿಷಯದಲ್ಲಿ ಕರುಣಾ ಕಟಾಕ್ಷ ಪರಿಪೂರ್ಣವಾಗಿ ಇರ ಬೇಕು ಎಂದು ರಾಜ ನೀತಿಯನ್ನು ತಿಳಿಸಿದನು. ಅದನ್ನು ಪರಮ ವಿವೇಕಿಯಾದ ರಾಜ ಕುಮಾರನು ಮನಸ್ಸಿಗೆ ತಂದು ಕನಿಕರದಿಂದ ಪ್ರಜಾರಂಜನೆಯೇ ಮುಖ್ಯವಾಗಿ ರಾಜ್ಯವನ್ನಾಳುತ್ತಾ ಬಹು ಕಾಲ ಸೌಖ್ಯವಾಗಿದ್ದನು. ಇದೇ ಪ್ರಕಾರ ಮಹಾ ಮಂತ್ರಿಗಳ ಆಲೋಚನೆಯಿಂದ ರಾಜ್ಯವನ್ನು ಆಳುವ ಧೊರೆಗಳು ಸೌಖ್ಯ ಕೀರ್ತಿಗಳನ್ನು ಹೊಂದುವರು.

---

## 40. THE ELEPHANTS AND THE RATS.

### ೪೦. ಆನೆಗಳೂ ಇಲಿಗಳೂ.

ಕೋಯಿ ಮುತ್ತೂರು ಸತ್ಯಮಂಗಲ ಮುಂತಾದ ಶೀಮೆಯಲ್ಲಿ ಕಾಡಾನೆಗಳ ಅವಾಂತ್ರ ಬಹಳವಾಗಿರುವದು. ರಾತ್ರಿ ವೇಳೆಯಲ್ಲಿ ಗುಂಪು ಗುಂಪಾಗಿ ಆನೆಗಳು ಬಂದು ಕಬ್ಬು ತೋಟ ಬಾಳೆ ತೋಟಗಳನ್ನು ಕಿತ್ತು ತಿಂದು ಧ್ವಂಸ ಮಾಡುತ್ತಿರುವವು. ಹೀಗೆ ಆನೆಗಳಿಂದ ಕಿತ್ತು ಹಾಕಲ್ಪಟ್ಟ ಅಷ್ಟಿಷ್ಟು ಉಳಿದ ಬತ್ತದ ಗದ್ದೆಯನ್ನು ಇಲಿಗಳ ಗುಂಪು ಬಂದು ತಿಂದು ಹೋಗುವದು. ಹೀಗೆ ಆನೆಗಳಿಂದಲೂ ಇಲಿಗಳಿಂದಲೂ ಆ ಶೀಮೆಯ ಬೆಳೆಗೆ ಬಹಳ ಕೇಡುಂಟಾಗಿರುವದು. ಹೀಗಿರುವಲ್ಲಿ ಒಂದು ದಿವಸ ರಾತ್ರಿ ದೊಡ್ಡ ಮಳೆ ಹೊಯಿದು ಕಾವೇರಿ ಭವಾನಿ ಎಂ

ಬ ನದಿಗಳು ಪೂರಾ ಪ್ರವಾಹ ಹರಿಯುತ್ತಿರಲಾಗಿ, ಎಂದಿನ ಹಾಗೆಯೇ ಆನೆಗಳೂ ಇಲಿಗಳೂ ತೋಟ ಗದ್ದೆಗಳನ್ನು ಮೇದು ಬೆಳಗಿನ ಝಾಮುವಲ್ಲಿ ಓಡಿ ಹೋಗುವಾಗ ಪ್ರವಾಹವನ್ನು ದಾಟುವ ಸಾಮರ್ಥ್ಯವಿಲ್ಲದ ಇಲಿಗಳ ಗುಂಪು ಆನೆಗಳ ಗುಂಪನ್ನು ನೋಡಿ, ಎಲೈ ಆನೆಗಳಿರಾ, ಹೊಳೆಯನ್ನು ದಾಟುವದಕ್ಕೆ ನೀವು ಶಕ್ತರು, ನಾವು ಅಶಕ್ತರು, ಆದ್ದರಿಂದ ನಮ್ಮ ಮೇಲೆ ದಯವಿಟ್ಟು ನೀವು ನಮ್ಮನ್ನು ಈ ಹೊಳೆಯ ದಾಟಿಸಿ ಕಾಪಾಡಿದರೆ ಈ ಉಪಕಾರಕ್ಕೆ ಪ್ರತ್ಯುಪಕಾರವನ್ನು ನಾವು ನಿಮಗೆ ಎಂದಿಗಾದರೂ ಮಾಡುವೆವು, ಎಂದು ಪ್ರಾಣ ಭಯದಿಂದ ಬೇಡಿಕೊಂಡಿತು. ಈ ಚಿಕ್ಕ ಚಿಕ್ಕ ಇಲಿಗಳಿಂದ ಬಲವಂತರಾದ ನಮಗೆ ಏನು ಉಪಕಾರವಾದೀತೆಂದು ತಾತ್ಸಾರ ಮಾಡಿ, ಆನೆಗಳ ಗುಂಪೆಲ್ಲಾ ಹೊಳೆಯ ದಾಟಿ ಹೋದವು. ಅವುಗಳ ಹಿಂದುಗಡೇಲಿ ಹೋದ ಒಂದು ದೊಡ್ಡ ಮುದಿಯಾನೆ ಮಾತ್ರ ಇಲಿಗಳ ಮಾತನ್ನು ಅಸಡ್ಡೆ ಮಾಡದೆ ತನ್ನ ಅಗಲವಾದ ಬೆನ್ನಿನ ಮೇಲೆ ಒಂದೊಂದು ಸಾರಿಗೆ ಬಹಳ ಇಲಿಗಳನ್ನು ಗುಂಪು ಗುಂಪಾಗಿ ಏರಿಸಿಕೊಂಡು ಒಂದು ಇಲಿಯಾದರೂ ಸಾಯದ ಹಾಗೆ ಹೊಳೇ ದಾಟಿಸಿ ಬಿಟ್ಟು, ಇಲಿಗಳಿರಾ ಬದಿಕಿರಿ, ಆಡಿದ ಮಾತು ನೆರವೇರಿಸಿರಿ, ಲೋಕದಲ್ಲಿ ಪ್ರತ್ಯುಪಕಾರವನ್ನು ಅಪೇಕ್ಷಿಸದೆ ಪರರಿಗೆ ಉಪಕಾರಗಳನ್ನೇ ಮಾಡುವವರು ಉತ್ತಮೋತ್ತಮರು, ಪರೋಪಕಾರವನ್ನು ಮಾಡಿ, ಅವರಿಂದ ಪ್ರತ್ಯುಪಕಾರವನ್ನು ಅಪೇಕ್ಷಿಸುವವರು ಉತ್ತಮರು, ಪರರಿಂದ ಉಪಕಾರವನ್ನು ಹೊಂದಿ ಪ್ರತ್ಯುಪಕಾರವನ್ನು ಮಾಡುವದಕ್ಕೆ ಶಕ್ತಿ ಇಲ್ಲದೆ ಮನಸ್ಸಿನಲ್ಲೂ ಮಾತಿನಲ್ಲೂ ಪರ ಉಪಕಾರಕ್ಕೆ ಪ್ರತ್ಯುಪಕಾ

ರವನ್ನು ಮಾಡುವದಕ್ಕೆ ಇಲ್ಲದೆ ಹೋಯಿತಲ್ಲಾ ಎಂದು ವ್ಯಸನ ಪಡುವವರು ಮಧ್ಯಮರು. ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡ ಮನಸ್ಸಿಲ್ಲದೆ, ಆ ಉಪಕಾರವನ್ನು ಮರತು ಹೋಗುವವರು ಅಧಮರು, ಉಪಕಾರಿಗಳಿಗೆ ಅಪಕಾರವನ್ನೇ ಹುಡಿಕಿ ಹುಡಿಕಿ ಮಾಡುವವರು ಅಧಮಾಧಮರು. ಹೀಗೆ ಐದು ಪ್ರಕಾರವಾದ ಪ್ರಕೃತಿಗಳಲ್ಲಿ ಉತ್ತಮೋತ್ತಮರು, ಉತ್ತಮರು, ಇವರಿಬ್ಬರೂ ಕೃತಜ್ಞರೆನ್ನಿಸಿಕೊಂಬುವರು, ಅಧಮರು ಅಧಮಾಧಮರು ಇವರಿಬ್ಬರೂ ಕೃತಘ್ನರೆನ್ನಿಸಿ ಕೊಳ್ಳುವರು, ಮಧ್ಯಮರು ದ್ವಿಸ್ವಭಾವ ಉಳ್ಳ ಮಿತ್ರರೆನ್ನಿಸಿ ಕೊಳ್ಳುವರು, ಆದ್ದರಿಂದ ಇಲಿಗಳಿರಾ, ನೀವು ಕೃತಘ್ನರಾಗ ಬೇಡಿರಿ, ಮಿತ್ರರಾಗುವಿರೋ ಏನೋ ನನಗೆ ತಿಳಿಯದು, ಕೃತಜ್ಞರಾಗಿ ಕೀರ್ತಿ ಸಂಪಾದಿಸಿರೆಂದು ಇಲಿಗಳಿಗೆ ಬೋಧಿಸಿ, ಆನೆಗಳ ಗುಂಪಿನ ಸಂಗಡ ಹೊಗಿ ಸೇರಿಕೊಂಡಿತು. ಇಲಿಗಳು ತಮ್ಮ ತಮ್ಮ ಬಿಲಗಳಲ್ಲಿ ಸೇರಿಕೊಂಡವು. ತರುವಾಯ ಒಂದು ದಿವಸ ಆ ಶೀಮೆಯ ಒಕ್ಕಲಿಗರೆಲ್ಲಾ ಕೂಡಿ ನಮ್ಮ ಪೈರನ್ನು ನಾಶ ಮಾಡುವ ಆನೆಗಳನ್ನು ಹಿಡಿಯ ಬೇಕೆಂದೆಣಿಸಿ, ಆನೆಗಳು ಬರುವ ಹಾದಿಯಲ್ಲಿ ದೊಡ್ಡ ಕಪ್ಪುಗಳು ತೆಗದು, ಅವುಗಳಿಗೆ ಮುಚ್ಚಳದ ಚಪ್ಪರವನ್ನು ಹಾಕಿ ಅದರ ಮೇಲೆ ಗೇಣುದ್ದ ಮಣ್ಣನ್ನು ಹರಡಿ, ತಳ್ಳಗೆ ಜೋಳದ ಪೈರನ್ನು ಬೆಳಸಿ ಇಟ್ಟರು. ಈ ಮೇರೆಗೆ ಒಂದು ಕಡೆಯಲ್ಲದೆ ಶೀಮೆಯಲ್ಲಿರುವ ತೋಟ ತೋಟಗಳ ಹತ್ತಿರ ಕಪ್ಪುಗಳನ್ನು ಮರೆ ಮಾಡಿದ್ದರು. ಆನೆಗಳು ಜೋಳದ ಪೈರಿನ ಆಶೆಯಿಂದ ಬಂದು ಕಪ್ಪುಗಳಲ್ಲಿ ಬಿದ್ದು ಹೋದವು. ಆಗ ಇಲಿಗಳ ಗುಂಪು ಮೊದಲು ತನಗೆ ಉಪಕಾರಾ ಮಾಡಿದ ಮುದಿಯಾನೆಯ

ಕ್ರಮವನ್ನು ನೋಡಿ ಅದು ಬಿದ್ದಿರುವ ಹಳ್ಳದ ಸುತ್ತಲಿರುವ ಮಣ್ಣನ್ನು ತೋಡಿ ಹಳ್ಳವನ್ನು ಹೂಳುತ್ತಾ ಬರಲು, ಆ ಆಸರೆಯಿಂದ ಮುದಿಯಾನೆ ತನ್ನೊಂದಿಗೆ ಬಿದ್ದಿರುವ ಆನೆಗಳೊಡನೆ ಆ ಮಣ್ಣನ್ನು ಮೆಟ್ಟಿ ಮಿಟ್ಟೆ ಮಾಡಿ ಕೊಂಡು ಮೇಲಕ್ಕೆ ಬಂದು, ತರುವಾಯ ಅಲ್ಲಲ್ಲಿ ಕಪ್ಪುಗಳಲ್ಲಿ ಬಿದ್ದಿರುವ ಆನೆಗಳನ್ನೆಲ್ಲಾ ಇದೇ ಪ್ರಕಾರ ಮೇಲಿನ ಮಣ್ಣಿನಿಂದ ಹಳ್ಳಗಳನ್ನು ಹೂಳಿ ಆ ತಿಟ್ಟುಗಳ ಆಸರೆಯಿಂದ ಎದ್ದು ನಿಂತವುಗಳ ಸೊಂಡಲುಗಳನ್ನು ತಮ್ಮ ತಮ್ಮ ಸೊಂಡಲುಗಳಿಂದ ಹಿಡಿದು ಹೊರಗೆ ತೆಗೆದು, ಎಲ್ಲಾ ಗುಂಪಾಗಿ ಮಹೋಪಕಾರಿಗಳಾದ ಇಲಿಗಳನ್ನು ಹೊಗಳುತ್ತಾ ಹೊರಟು ಹೋದವು. ಹೀಗೆ ಉಪಕಾರಿಗಳಿಗೂ ಪ್ರತ್ಯುಪಕಾರಿಗಳಿಗೂ ಅಕಸ್ಮಾತ್ತಾಗಿ ಬಂದ ಅಪಾಯಗಳು ಪರಸ್ಪರವಾಗಿ ಪರಿಹರಿಸಲ್ಪಡುವವು.

---

## 41. THE HONEST MERCHANT AND THE ROGUISH RYOT.

### ೪೧. ಸಂಪನ್ನ ಶೆಟ್ಟಿಯೂ ಗಂಟು ಕಳ್ಳ ರೈತನೂ.

ಸಂಪನ್ನ ಶೆಟ್ಟಿ ಎಂಬ ಒಬ್ಬ ವರ್ತಕನಿದ್ದನು, ಅವನು ಹಳ್ಳಿ ಪಳ್ಳಿಗಳಲ್ಲಿರುವ ಗವುಡರಿಗೂ ರೈತರಿಗೂ ನೂರಾರು ವರಹಾಗಳು ಬಡ್ಡಿಗೆ ತಲವಾಸಿಗೆ ದವಸಕ್ಕೆ ಸಹ ಕೊಟ್ಟು ತೆಕ್ಕೊಳ್ಳುತ್ತಾ ವ್ಯಾಜ್ಯ ವ್ಯವಹಾರಗಳಿಲ್ಲದೆ ಸಚೂಟಿಯಾಗಿ ವರ್ತಕತನ ಮಾಡಿಕೊಂಡು, ಒಳ್ಳೇ ಸಂಪನ್ನನು ಒಳ್ಳೇ ಸಂಪನ್ನನು ಎಂಬ ಹೆಸರುವಾಸಿ ಸಂಪಾದಿಸಿ ಕಾಲಕ್ಷೇಪ ಮಾಡುತ್ತಿರುವನು.

ಹೀಗಿರುವಲ್ಲಿ ಆ ಶೆಟ್ಟಿಯು ಗಂಟುಕಳ್ಳ ವೀರನೆಂಬ ಒಬ್ಬ ತುಂಟ ಒಕ್ಕಲಿಗನಿಗೆ ಪತ್ರ ಬರಿಸಿ ಕೊಂಡು ನೂರು ವರಹಾ ಸಾಲ ಕೊಟ್ಟನು. ಆದರೆ ಒಕ್ಕಲಿಗನ ಮೋಸಗಾರಿಕೆ ಶೆಟ್ಟಿಗೆ ತಿಳಿಯದೆ ಅವನ ಜೇಳಿವೆ ಮಾತಿಗೆ ಬೆರಗಾಗಿ ನಾಲ್ಕಾರು ಏರುಳುವ ಸಂಸಾರಿ ಎಂಬ ನಂಬಿಕೆಯಿಂದ ಶೆಟ್ಟಿ ಹತ್ತೆಂಟು ವರುಷವ ವರೆಗೂ ಕೊಟ್ಟ ಹಣಕ್ಕೆ ತಗಾದಿ ಹಚ್ಚದೆ ಸುಮ್ಮನೆ ಇದ್ದನು. ತರುವಾಯ ಶೆಟ್ಟಿಯು ಚೀಟು ಬರದು ಆಳನ್ನು ಕಳುಹಿಸಲು, ಗಂಟುಕಳ್ಳ ವೀರನು ಆ ಆಳನ್ನು ನೀನ್ಯಾರು ? ಅವನ್ಯಾರು ? ಹಣವೇನು ? ಕಾಸೇನು ? ನಾನರಿಯೆ, ಹೋಗೆಂದು ಉಡಾಫೆ ಮಾಡಿದನು. ಆ ಆಳು ಬಹಳ ತರದೂದಿನಿಂದ ಮಾಡುವ ತಗಾದೆಗೆ ತಪ್ಪಿಸಿ ಕೊಂಡು ಗಂಟುಕಳ್ಳ ವೀರನು ಓಡಿ ಹೋದನು. ಈ ಸಂಗತಿಯನ್ನು ತಿಳಿಸಿದ ಆಳಿನ ಮಾತನ್ನು ಕೇಳಿ ವರ್ತಕನು ತಾನೇ ಬಂದು ಈ ತುಂಟನು ಮನೆಯಲ್ಲಿರುವ ಸಮಯದಲ್ಲಿ ಕಂಡು ಹಿಡಿದು, ಪತ್ರಾರ್ಥದ ಹಣ ಕೊಡೆಂದು ತಗಾದಿ ಹಚ್ಚಿದನು. ಅದಕ್ಕವನು ಪತ್ರವಂದರೇನು? ನಾನು ನಿನಗೆ ಪತ್ರವೇನೂ ಬರಕೊಡಲಿಲ್ಲ, ನೀನು ಓದು ಬರಹಾ ಕಲಿತವನು, ನನ್ನ ಹೆಸರಿನಲ್ಲಿ ನೀನೇ ಪತ್ರಾ ಬರಕೊಂಡಿದ್ದಿಯೋ ಏನೋ ? ಹೀಗೆ ಎಷ್ಟು ಮನೆಗಳ ಮುಣಿಗಿಸಿದ್ದೀ? ನನಗೆ ನೀನು ನೂರು ವರಹಾ ಎಣಿಸಿ ಕೊಟ್ಟದ್ದಕ್ಕೆ ಸಾಕ್ಷಿ ತೋರಿಸು, ಎಂದೋ ಒಂದು ದಿವಸ ಕಂದಾಯಕ್ಕೆ ಹತ್ತು ರೂಪಾಯಿ ಕೊಟ್ಟದ್ದಿ, ಅದ ಆ ಹೊತ್ತೇ ತೀರಿಸಿ ಬಿಟ್ಟೆ, ಇನ್ನೇನೂ ಕೊಡ ತಕ್ಕದ್ದಿಲ್ಲ, ಹೋಗೆಂದು ದಬಾಯಿಸಿದನು. ಅವನ ದಬಾವಣಿಗೆ ಈ ವರ್ತಕನು ಅಂಜದೆ ಎಲೋ ಗಂಟುಕಳ್ಳನೇ, ಕಚೇರಿಗೆ ನಡಿ, ನಿನ್ನ ಪೂರ್ವೋತ್ತರ

ವಿಂಗಡಿಸುತ್ತೇನೆ, ಎಂದು ಶರಗು ಹಿಡಿದು ದರದರನೆ ಎಳಕೊಂ
ಡು ಹೋದನು. ಆಗ ಈ ತುಂಟ ಒಕ್ಕಲಿಗನು ಈ ಉಳ್ಳಿ
ಗೆಡ್ಡೆ ಮಾರಿಕೊಂಡು ಕಾಲಾ ಕಳೆಯುವ ವರ್ತಕನಿಗೆ ತಕ್ಕ ಕೆಲ
ಸ ಕೊಡ ಬೇಕೆಂದೆಣಿಸಿ ಹೊಂದಿಕೆ ಮಾತುಗಳಾಡಿ, ಎಷ್ಟಾದರು
ಕೊಟ್ಟವನು ತಾಯಿ, ತಾಯಿಗೆ ಮೋಸ ಮಾಡಬಾರದೆಂದು ನ್ಯಾ
ಯವಾದ ಮಾತುಗಳು ನುಡಿಯುತ್ತಾ ಶೆಟ್ಟಿಯ ಮನಸ್ಸು ಕರಗಿಸಿ,
ಕಚೇರಿ ಇರುವ ಊರಿನ ಸಮೀಪಕ್ಕೆ ಬಂದು ಅಲ್ಲಿ ಕೂತು
ಕೊಂಡು, ಅಯ್ಯಾ ಶೆಟ್ಟೀ, ನಿನ್ನ ಪತ್ರವೆಲ್ಲಿ? ನೋಡೋಣ, ನ
ಮ್ಮ ನ್ಯಾಯ ನಾವೇ ಹರಿಸಿ ಕೊಳ್ಳೋಣ ಅನ್ನಲು, ವರ್ತಕ
ನು ಇಗೋ ನೋಡು, ನಿನ್ನ ಪತ್ರವೆಂದು ಸಡುವಿನಲ್ಲಿದ್ದ ಕಾಗದ
ವನ್ನು ತೆಗದು ಕೊಟ್ಟನು. ಆ ಕ್ಷಣವಲ್ಲೇ ಈ ಒಕ್ಕಲಿಗನು
ಅದನ್ನು ಪರ್‍ರಂತ ಹರಿದು ಅಲ್ಲಿದ್ದ ಸೇದುವ ಭಾವಿಯಲ್ಲಿ ಹಾಕಿ
ಬಿಟ್ಟನು. ಆಗ ಮಹಾ ಕೋಪವನ್ನು ಹೊಂದಿದ ಸಂಪನ್ನ
ಶೆಟ್ಟಿ ಗಂಟು ಕಳ್ಳನ ಮಡಿ ಹಿಡಿದು ಬಂದೇ ಬಿರುವಿನಲ್ಲಿ ಕ
ಚೇರಿಗೆ ಎಳಕೊಂಡು ಹೋಗಿ, ನ್ಯಾಯಾಧಿಕಾರಿಗೆ ಆ ತುಂಟ ಒ
ಕ್ಕಲಿಗನು ಮಾಡಿದ ಸಂಗತಿಯನ್ನೆಲ್ಲಾ ತಿಳಿಸಲು, ಆ ಅಧಿಕಾರಿ
ಯು ಎಲೋ ಒಕ್ಕಲಿಗಾ, ನಿನ್ನ ಹೆಸರು ಗಂಟು ಕಳ್ಳವೀರನು
ಹಾದೋ, ಆ ಹೆಸರಿಗೆ ತಕ್ಕ ಹಾಂಗೆ ಕೊಟ್ಟವರ ಗಂಟನ್ನು ನುಂ
ಗಿ ಬಿಟ್ಟಿಯೋ ? ಗಂಟು ನುಂಗಿದ್ದಲ್ಲದೆ ಪತ್ರವನ್ನು ಸಹ
ಹರಿದು ಬಿಟ್ಟೆಯಾ ? ಸುಳ್ಳು ಹೇಳಬೇಡ, ಪ್ರಮಾಣವಾಗಿ ಹೇ
ಳೆಂದು ಅಪ್ಪಣೆಸಿದನು. ಆ ತುಂಟನು ಪ್ರಮಾಣಕ್ಕೆ ಹಿಂ
ತೆಗಿಯದೆ ನಾನು ಇವನ ಪತ್ರವನ್ನು ಹರಿಯಲಿಲ್ಲವೆಂದು ಬೊಂ
ಕಿದನು. ಆಗ ನ್ಯಾಯಾಧಿಪತಿಯು, ಓ ಸಂಪನ್ನ ಶೆಟ್ಟೀ, ಇವನು

ನಿನ್ನ ಪತ್ರವನ್ನು ಹರಿದು ಭಾವಿಯಲ್ಲಿ ಹಾಕಿ ಬಿಡುವಾಗ ಕೆಲವು ಚೂರುಗಳು ಘೋಳಿಗೆ ಹಾರಿ ಮೇಲೆ ಎಲ್ಲಾದರು ಬಿದ್ದಿರಬಹುದು, ಹುಡಿಕಿ ಆದುಕೊಂಡು ಬಾ ಹೋಗೆಂದನು. ಹಾಗೆಯೇ ಆಗಲೆಂದು ವರ್ತಕನು ಹೊರಟು ಹೋದ ತರುವಾಯ, ನ್ಯಾಯಾಧಿಪತಿಯು ವರ್ತಕರೇ ಮೋಸಗಾರರು ಹೊರ್ತು ಒಕ್ಕಲ ಮಕ್ಕಳಲ್ಲಿ ಮೋಸಗಾರಿಕೆ ಎಷ್ಟು ಮಾತ್ರವೂ ಇಲ್ಲವೆಂದು ಲೋಕಾಭಿರಾಮವಾದ ಮಾತುಗಳಿಂದ ಈ ಒಕ್ಕಲಿಗನನ್ನು ಉಬ್ಬಿಸಿ, ಇಷ್ಟು ಹೊತ್ತಿಗೆ ಆ ವರ್ತಕನು ಆ ಸ್ಥಳಕ್ಕೆ ಹೋಗಿರುವನೋ ಎಂತ ಅಂದು ಕೊಂಡದ್ದಕ್ಕೆ, ಇನ್ನೂ ಹೋಗಿರಲಾರನು ಬುದ್ಧಿ, ಎಂಬ ಮಾತು ಗಂಟುಕಳ್ಳ ವೀರನ ಬಾಯಿಂದ ಹೊರಟಿತು. ಆ ಮರ್ಮವನ್ನು ಗ್ರಹಿಸಿ ನ್ಯಾಯಾಧಿಪತಿಯು ಈ ಒಕ್ಕಲಿಗನನ್ನು ಹಿಂಗಟ್ಟು ಕಟ್ಟಿಸಿ, ಜಿಲೇಬಿದಾರಾ, ಇವನಿಗೆ ನೂರ ಇಪ್ಪತ್ತು ಕೊರಡೆ ಹೊಡಿ, ಪತ್ರ ಹರಿಯದಿದ್ದರೆ ಆ ಸ್ಥಳದ ಗೊತ್ತು ಇವನಿಗೆ ಹ್ಯಾಗೆ ತಿಳಿಯಿತು, ಎಂದು ಗದರಿಸಿದ ಮಾತ್ರದಲ್ಲೇ, ಗಂಟುಕಳ್ಳ ವೀರನು ಬುದ್ಧೀ, ಹಣ ಕೊಡ ತಕ್ಕದ್ದು ಉಂಟೆಂದನು. ನ್ಯಾಯಾಧಿಪತಿಯು ಕೊಟ್ಟುಬಿಡೆಂದು ವರ್ತಕನಿಗೆ ಹಣಾ ಕೊಡಿಸಿ ಕಳುಹಿಸಿದನು.

---

## 42. A DISPUTE ABOUT JAGGORY.

## ೪೨. ಬೆಲ್ಲದ ಕಿತ್ತಾಟ.

ನಾಮಗುಂಡ್ಲದ ಬೆಲ್ಲದ ಶೆಟ್ಟಿ ಎಂಬವನು ಬೆಲ್ಲದ ವ್ಯಾಪಾರದಲ್ಲೇ ಬಲ್ಲಿದನಾಗಿದ್ದನು. ಅವನು ಕಬ್ಬು ತೋಟ ಮಾಡುವ

ರೈತರಿಗೆ ಬೆಲ್ಲಕ್ಕೆ ಮುಂಗಡವಾಗಿ ಬಹಳ ಹಣ ಕೊಟ್ಟು, ಆಲೆಯಾಡಿ ಬೆಲ್ಲವಾದ ಕೂಡಲೇ ಉಂಡೆಗಳನ್ನೂ ಅಚ್ಚುಗಳನ್ನೂ ಭಂಡಿಗಳಿಗೂ ಎತ್ತಿನ ಹೇರುಗಳಿಗೂ ತುಂಬಿ, ಕಣಿವೇ ಮೇಲಿನ ಸೀಮೆಯಿಂದ ಕಣಿವೇ ಕೆಳಗೆ ಚೆನ್ನಪಟ್ಣ ಮುಂತಾದ ಸ್ಥಲಗಳಿಗೆ ಕೇಪು ಕಳುಹಿಸಿ ಬಂದಕ್ಕೆರಡು ಲಾಭ ಬರುವ ಮೇರೆಗೆ ಮಾರಿಸಿ ಬಹಳ ದ್ರವ್ಯವಂತನಾಗಿ ಇದ್ದನು. ಹೀಗಿರುವಾಗ ಒಂದು ಸಲ ಈ ಶೆಟ್ಟಿಗಾರನು ಸಾವಿರಾರು ಭಂಡಿಗಳೂ ಹೇರುಗಳೂ ಕೋಲಾರ ಮಾರ್ಗವಾಗಿ ಸಾಗಿ ಹೋಗ ಕಳುಹಿಸಿ, ತಾನು ಹತ್ತೆಂಟು ಗೋಣಿಗಳನ್ನು ಎತ್ತುಗಳ ಮೇಲೆ ಹೇರಿಸಿ, ಒಂದು ಮಜಲು ಹಿಂದಾಗಿ ಹೋಗುತ್ತಿರುವಾಗ, ಭಲ್ಲೇರಿ ಎಂಬ ಗ್ರಾಮದ ಬಳಿಯ ಹುಲ್ಲಿಗಳ ಚಲ್ಲಾಟಕ್ಕೆ ಈ ಎತ್ತುಗಳಲ್ಲಿ ಒಂದು ಕಾಯಿ ಹೋರಿ ಬೆದರಿ ಹಾರಿತು. ಆಗ "ಎತ್ತು ಹಾರುವದಕ್ಕೆ ಮುಂಚೆ ಗೋಣಿ ಹಾರಿತು" ಎಂಬ ಸಾಮತಿಗೆ ಸರಿಯಾಗಿ, ಆ ಹೋರೀ ಮೇಲಿನ ಬೆಲ್ಲದ ಗೋಣಿ ಮೂರಾರು ಬಾರು ದೂರ ಹಾರಿ ಬಿತ್ತು. ಹೇರುಗಳ ಸಂಗಡ ಬರುತ್ತಿದ್ದ ಆಳುಗಳು ಮುಂದಕ್ಕೆ ಸಾಗಿ ಹೋದರು. ಶೆಟ್ಟಿಯು, ಹೋರಿ ಹಾರಿ ಬಿದ್ದ ಗೋಣಿ ಸಹಿತ, ಹಿಂದಾದನು. ಆಗ ತಂಟ್ಲೇ ಮಾರನೆಂಬ ಒಬ್ಬ ಒಕ್ಕಲಿಗರ ಹುಡುಗನು ಆ ದಾರಿಯ ಮಗ್ಗಲಲ್ಲೇ ದನಗಳ ಮೇಯಿಸುತ್ತಾ ಇದ್ದನು. ಅವನನ್ನು ನೋಡಿ ಶೆಟ್ಟಿಯು ಎಲಾ ಹುಡುಗಾ, ರವಷ್ಟು ಇಲ್ಲಿ ಬಾ, ನಿನಗೆ ಕಾನೆ ಬೆಲ್ಲ ಕೊಡುತ್ತೇನೆ, ಈ ಗೋಣೀ ಹಿಡಿದು ಎತ್ತು, ಎತ್ತಿನ ಮೇಲೆ ಹಾಕೋಣ, ಎಂದು ಕೂಗಲು, ಆ ಹುಡುಗನು ಹತ್ರಕ್ಕೆ ಬಂದು ಇದು ಬೆಲ್ಲದ ಗೋಣಿಯೋ ಉಪ್ಪಿನ ಗೋಣಿಯೋ? ನಾನು ಇದನ್ನು

ಹಿಡಿವರೆ ಶಾನೆ ಬೆಲ್ಲ ಕೊಡುತ್ತೀಯೋ? ಅಂದನು, ಅದಕ್ಕೆ ಶೆಟ್ಟಿಯು ಎಲಾ ತಂಡಕ ಹುಡುಗನೇ, ಇದು ಉಪ್ಪಲ್ಲ, ಬೆಲ್ಲವೇ, ಗೋಣೀ ಹಿಡಿದಿತ್ತು, ಶಾನೆ ಬೆಲ್ಲ ಕೊಡುತ್ತೇನೆ, ತಿಂದು ನೀರು ಕುಡಿಯುವಿಯಂತೆ, ಉಪ್ಪು ತಿಂದಷ್ಟು ದಾಹರವಾಗಿ ಒಣಗಿ ಹೋದೀಯೆ, ಬೆಲ್ಲವೇ ತಿನ್ನು, ಎಂದು ಮಾತನಾಡಿಸಿ, ತಾನು ಅವನ ಕೂಡ ಹೇರತ್ತಿ ಹೋರೀ ಮೇಲೆ ಹಾಕಿ ಹೋರಿಯನ್ನು ದಾರಿಯಲ್ಲಿ ಸಾಗ ಬಿಟ್ಟು ತನ್ನ ಹೆಗಲಿನ ಹಸಿಬೆಯಲ್ಲಿದ್ದ ಬೆಲ್ಲದ ಉಂಡೆಗಳಲ್ಲಿ ಒಂದುಂಡೆಯನ್ನು ತೆಗದು ಆ ಹುಡುಗನಿಗೆ ಕೊಟ್ಟನು. ಆಗ ಆ ತಂಡಕನು ಏನೈಯ್ಯಾ, ಶೆಟ್ಟೀ, ನೀನು ಒಳ್ಳೇವನೇ, ಶಾನೆ ಬೆಲ್ಲ ಕೊಡುತ್ತೇನೆಂದು ಹೇಳಿ ಒಂದುಂಡೆ ಕೈಲಿಕ್ಕಿದಿ, ನಿನ್ನ ಬಿಡೋದಿಲ್ಲ, ಕೊಟ್ಟುಬಿಟ್ಟು ಹೋಗು, ಎಂದು ಶರಗು ಹಿಡಿದು ಕೊಂಡು ಹಿಗ್ಗಾ ಮುಗ್ಗಾ ಎಳದನು. ಶೆಟ್ಟಿಗೆ ಕೋಪ ಬಂದಾಗ್ಯೂ, ಅವನು ಇವನು ಹುಡುಗನು, ಹೊಡೆಯಬಾರದೆಂದು ತಾಳಿಮೆಯಿಂದ ಸಮದಾಯಿಸಿ, ಎರಡು ಮೂರು ಉಂಡೆಗಳು ಕೊಟ್ಟಾಗ್ಯೂ, ಶಾನೆ ಕೊಡು, ಶಾನೆ ಕೊಡು, ಎಂಬ ಮಾತು ಬಿಡದೆ ತೊಂದರೆ ಪಡಿಸಿದನು. ಆಗ ಶೆಟ್ಟಿಯು ಬೆಸ್ತಾಗಿ ಹುಡುಗ ಸಹವಾಸ ಬಂತಲ್ಲಪ್ಪಾ ಎಂದು ಕಿತ್ತಾಡುತ್ತಾ ಇರುವಾಗ, ಆ ಮಾರ್ಗದಲ್ಲಿ ಬಂದ ಒಬ್ಬ ಮನುಷ್ಯನು ಇದನ್ನು ನೋಡಿ ತಂಟ್ಲೆ ಮಾರನೆಂಬ ಹೆಸರು ನಿನಗೆ ಸಲ್ಲೋದೆಂದು ಉಬ್ಬಿಸಿ, ಹುಡುಗನಿಗೆ ತಕ್ಕ ಉಪಾಯ ಮಾಡ ಬೇಕೆಂದು, ಒಂದುಂಡೆ ಬೆಲ್ಲವನ್ನು ಒಡದು ನಿಂಬೇಕಾಯಷ್ಟು ಬೆಲ್ಲ ಬಲಗೈಯಲ್ಲೂ ನೆಲ್ಲೀಕಾಯಷ್ಟು ಎಡಗೈಯಲ್ಲೂ ಹಿಡುಕೊಂಡು, ಎಲಾ ಒಕ್ಕಲಿಗಾ, ಇದು ಶಾನೆಯೋ, ಇದು ಶಾನೆಯೋ, ಎಂದು ಕೇಳಿದನು.

ಅವನು „ಅತಿ ಯುಕ್ತಿ ಮತಿ ಕೆಡಿಸಿತೆಂಬ" ಗಾದೆಗೆ ಸರಿಯಾಗಿ ಇದು ತಾನೆ ಎಂದು ಬಲಗೈ ಬೆಲ್ಲವನ್ನು ತೋರಿಸಿದನು. ಅದರೆ ಹಿಡಿ, ನಿನ್ನ ಹಿಡಿ ತುಂಬಿತು, ಬಾಯಿ ತುಂಬ ಹಾಕ್ಕೊ, ತುಂಬಾ ಬೆಲ್ಲವಾಯಿತೋ, ಹೋಗು, ದಾರಿ ಹಿಡಿ, ಎಂದು ಆ ಮನುಷ್ಯನು ಗದರಿಸಿದನು. ಆ ತಂಟ್ಲೆಮಾರಿ ಹುಡುಗನು ಅಡ್ಡ ಮೋರೆ ಹಾಕಿ ಕೊಂಡು ಓಡಿ ಹೋದನು. ಈ ಪ್ರಕಾರ ದೊಡ್ಡವರಾಗಲಿ ಚಿಕ್ಕವರಾಗಲಿ ಅತಿ ಆಸೆ ಪಟ್ಟರೆ, „ಕಡಾಸೆ ಕಣ್ಣು ಕೊಂಡು ಹೋಗುವದು" ಎಂಬ ಸಾಮತಿಯು ಹಾಗೆ ಮೊದಲಿಗೆ ಮೋಸ ಬರುವದು.

---

## 43. THE TWO SANYASIS AND THE TREASURE.

### ೪೩. ಇಬ್ಬರು ಸನ್ಯಾಸಿಗಳೂ ನಿಕ್ಷೇಪವೂ.

ದೇಶ ಸಂಚಾರದಿಂದ ತೀರ್ಥ ಯಾತ್ರೆಯನ್ನು ಮಾಡುತ್ತಿರುವ ಒಬ್ಬ ಸನ್ಯಾಸಿಯು ಮಹಾ ಯೋಗ್ಯನಾಗಿ ಅರ್ಥಾಪೇಕ್ಷೆ ಇಲ್ಲದೆ ಇದ್ದನು. ಅವನ ಕಣ್ಣಿಗೆ ಗೊಂಡಾರಣ್ಯದ ಮಾರ್ಗದಲ್ಲಿ ಒಂದು ನಿಕ್ಷೇಪವು ಕಾಣಿಸಿತು, ಅದನ್ನು ಕಂಡ ಮಾತ್ರದಲ್ಲಿ ಹೆದರಿ ಪ್ರಾಣಘಾತಕ ಪ್ರಾಣಘಾತಕವೆಂತ ಓಡಿ ಹೋಗುವ ಈ ಸನ್ಯಾಸಿಗೆ ಎದುರಾಗಿ ಇಬ್ಬರು ಬೇರೆ ಸನ್ಯಾಸಿಗಳು ಅವರ ಪರಿಚಾರಕನೊಬ್ಬನು ಅಂತು ಮೂರು ಮಂದಿ ಬರುತ್ತಾ, ಏನು ಕಂಡು ಬೆದರಿ ಓಡಿ ಹೋಗುತ್ತೀ ಎಂದು ಕೇಳಿದರು. ಅದಕ್ಕಿವನು ಪ್ರಾಣ ಘಾತಕವನ್ನು ದ್ರವ್ಯ ರೂಪವಾಗಿ ಕಂಡು ಬೆದರಿ ಓಡು

ತ್ತೇನೆಂದನು, ಆ ಮಾತನ್ನು ಕೇಳಿ ಇವನು ದಡ್ಡನೆಂದು ನಗುತ್ತಾ ಬಂದು, ಅವರು ಆ ನಿಕ್ಷೇಪವನ್ನು ಕಂಡು ಎತ್ತಿಕೊಂಡು ಕೆಲವು ದೂರ ಹೋಗಿ, ಅಲ್ಲೊಂದು ಭಾವಿಯೂ ಮಂಟಪವೂ ಇದ್ದದ್ದು ನೋಡಿ ಅಡಿಗೆ ಮಾಡಿ ಊಟ ಮಾಡುವದಕ್ಕಾಗಿ ನಿಂತರು. ಈ ಇಬ್ಬರು ಸನ್ಯಾಸಿಗಳನ್ನು ಕೊಂದು ಬಿಟ್ಟು ದ್ರವ್ಯವನ್ನು ತಾನೇ ಅಪಹರಿಸ ಬೇಕೆಂದು ಪರಿಚಾರಕನು ಆ ಇಬ್ಬರಿಗೂ ಮಾಡಿದ ಅಡಿಗೆಯಲ್ಲಿ ವಿಷವನ್ನು ಬೆರಸಿ ಇಟ್ಟನು. ಪರಿಚಾರಕನನ್ನು ಕೊಂದ ಹೊರ್ತು ಅವನಿಗೆ ಸಲ್ಲತಕ್ಕ ಪಾಲು ತಮಗೆ ದಕ್ಕದೆಂದು ಈ ಸನ್ಯಾಸಿಗಳು ನೆನಸಿ, ತಮಗೆ ಅಡಿಗೆ ಮಾಡಿಟ್ಟು ಭಾವಿಯ ಕಟ್ಟೆಯ ಮೇಲೆ ಕುಳಿತಿದ್ದ ಪರಿಚಾರಕನನ್ನು ಅದಾಟಾಗಿ ಭಾವಿಯೊಳಗೆ ತಳ್ಳಿ ಬಿಟ್ಟರು. ಅದರಲ್ಲಿ ಬಿದ್ದು ಸತ್ತ ಪರಿಚಾರಕನ ಅಡ್ಡಿ ತೀರಿದ ಸಂತೋಷದಿಂದ ಈ ಇಬ್ಬರು ಸನ್ಯಾಸಿಗಳೂ ಆ ವಿಷಾನ್ನವನ್ನು ಗಬಕು ಗಬಕ್ಕೆಂದು ತಿಂದು ಒರಗಿ, ದ್ರವ್ಯವು ಪ್ರಾಣಘಾತಕವೆಂಬ ಮಾತು ನಿಶ್ಚಯವೆಂದು ಕೂಗಿ ಡೊರಳಿ ಸತ್ತರು. ಹೀಗೆ ಅರ್ಥವು ಅನರ್ಥಕ್ಕೆ ಕಾರಣವಾಗಿರುವದು.

---

## 41. THE TRAVELLERS AND THE PURSE OF MONEY.

### ೪೧. ಗಂಟು ವ್ಯಾಜ್ಯದ ಮಾರ್ಗಸ್ಥರು.

ನಾಲ್ಕು ಮಂದಿ ಕೂಡಿ ಪ್ರಯಾಣ ಹೋಗುತ್ತಿರುವಾಗ, ದಾರಿಯಲ್ಲಿ ಒಂದು ಗಂಟು ಬಿದ್ದಿತ್ತು. ಅದನ್ನು ಅವರಲ್ಲಿ ಒಬ್ಬನು

ಕಂಡು ಅದೇನೋ ಗಂಟು ಬಿದ್ದದೆ ಎಂದು ಹೇಳಿದನು, ಮತ್ತೊಬ್ಬನು ಏನೋ ಬಟ್ಟೇ ಗಂಟು ಅಂದನು, ಇನ್ನೊಬ್ಬನು ಬಟ್ಟೇ ಗಂಟು ಆದಾಗ್ಯೂ ಘಟ್ಟಿಯಾಗಿರುವ ಹಾಗೆ ಕಾಣಿಸುತ್ತದೆ ಎಂದು ಅದರ ಹತ್ರಕ್ಕೆ ಬಂದನು, ಅಷ್ಟರಲ್ಲಿ ನಾಲ್ಕನೇಯವನು ಬೇಗ ಬಗ್ಗಿ ಗಂಟನ್ನು ಕೈಗೆ ಎತ್ತಿ ಕೊಂಡನು. ಎಲ್ಲರೂ ಒಟ್ಟಿಗೆ ಗಂಟು ಬಿಚ್ಚಿ ನೋಡಿ ಹಣವೆಂದು ತಿಳಿದು ಕೊಂಡ ಮೇಲೆ ಈ ಹಣವನ್ನು ನಾಲ್ಕು ಮಂದಿಯೂ ಸರಿಯಾಗಿ ಹಂಚಿ ಕೊಂಬೋಣ ಎಂದು, ಬಟ್ಟೇ ಗಂಟೆಂದ ಎರಡನೇಯವನು ಹೇಳಿದನು, ಘಟ್ಟಿಯಾದ ಗಂಟೆಂದು ಹೇಳಿದ ಮೂರನೇಯವನು ನಿನಗಿಂತಲು ನನಗೆ ಹೆಚ್ಚಾಗಿ ಪಾಲು ಬರ ಬೇಕೆಂದನು, ಗಂಟನ್ನು ಕಂಡ ಮೊದಲನೇಯವನು ನಿಮ್ಮಿಬ್ಬರಿಗಿಂತಲು ನನಗೆ ಹೆಚ್ಚಾಗಿ ಪಾಲು ಬರಬೇಕೆಂದನು, ನಾಲ್ಕನೇಯವನು ಗಂಟು ಸಿಕ್ಕಿದ್ದು ನನಗೆ, ನಿಮಗಲ್ಲ, ಯಾತಕ್ಕೆ ಪಾಲು ಕೊಡುವದು, ಅಥವಾ ಕೊಟ್ಟಾಗ್ಯೂ ಏನಾದರು ಅಲ್ಪ ಸ್ವಲ್ಪವಾಗಿ ಕೊಡುತ್ತೇನೆ ಎಂದು ಉಳಿದವರನ್ನು ಉಡಾಯಿಸಿ ಮಾತನಾಡಿದನು, ಈ ಮೇರೆಗೆ ಒಬ್ಬರಿಗೊಬ್ಬರಿಗೆ ವ್ಯಾಜ್ಯ ಉಂಟಾಗಿ ಒಬ್ಬರ ಮಾತೊಬ್ಬರು ಕೇಳದೆ ಅವರು ಈ ಸಂಗತಿಯನ್ನು ಬೇರೆ ನಾಲ್ಕು ಮಂದಿ ಸಂಪನ್ನರಿಗೆ ತಿಳಿಸಿ ಅವರು ಹೇಳಿದ ಪ್ರಕಾರ ಹಂಚಿಕೊಳ್ಳೋಣ ಎಂದು ಒಡಂಬಟ್ಟು, ಮಾರ್ಗದಲ್ಲಿರುವ ವೋರುಗಲ್ಲೆಂಬ ಊರಿಗೆ ಸೇರಿ ನಡುಪೇಟೆಗೆ ಬಂದು, ಸರಾಫ ಕಟ್ಟೆಯಲ್ಲಿ ಸ್ವಂತ ಅಂಗಡಿಯ ಮೇಲೆ ಕುಳಿತಿರುವ ಸಾವುಕಾರನನ್ನು ಕಂಡು, ಅಯ್ಯಾ ಶೆಟ್ಟಿ, ಈ ಗಂಟು ಅಮಾನತ್ತಾಗಿ ನಿನ್ನಲ್ಲಿ ಇಟ್ಟು ಕೊಂಡಿರು, ನಾವು ನಾಲ್ಕು ಮಂದಿಯೂ ಒಟ್ಟಿಗೆ ಬಂದು ಕೇಳಿದರೆ ಹೊರ್ತು ಕೊಡ

ಬೇಡ, ನಾವು ಅಗೋ ಆ ಭಾವಿಗೆ ಹೋಗಿ ಅಶನಾ ತೀರಿಸಿಕೊಂಡು ಬರುತ್ತೇವೆಂದು ಹೇಳಿ, ಗಂಟಿನ ಮೇಲೆ ತಮ್ಮ ಹೆಗ್ಗುರುತು ಮಾಡಿ ವರ್ತಕನ ಕೈಲಿ ಕೊಟ್ಟು ಹೋದರು. ತರುವಾಯ ಭಾವಿಗೆ ಹೋಗಿ ಬುತ್ತಿಯು ಬಾಯಲ್ಲಿ ಹಾಕಿಕೊಂಡು ಭಾವಿಯ ಕಟ್ಟೇ ಮೇಲೆ ಬಂದು ಕೂತು ಕೊಂಡು, ಎಲೆ ಅಡಿಕೆ ಗೋಸ್ಕರ ನಾಲ್ಕನೇಯವನನ್ನು ಶೆಟ್ಟಿಯ ಬಳಿಗೆ ಕಳುಹಿಸಿದರು, ಅವನು ಬಂದು ಒಂದು ದುಡ್ಡಿಗೆ ಎಲೆ ಅಡಿಕೆ ತರಿಸಿ ಕೊಡೆಂದು ಕೇಳುವದಕ್ಕೆ ಬದಲಾಗಿ, ಓ ಶೆಟ್ಟೇ, ಆ ಗಂಟಲ್ಲಿ ತಾ ಅಂದನು. ಶೆಟ್ಟಿಯು ನೀವ್ರ ನಾಲ್ಕು ಮಂದಿಯೂ ಕೂಡಿ ಬಂದು ಕೇಳಿದರೆ ಹೊರ್ತು ನಾನು ಕೊಡುವದಿಲ್ಲನೆಂದನು. ಆಗ ಆ ನಾಲ್ಕನೇಯವನು ಉಳಿದ ಮೂರು ಮಂದಿಯನ್ನು ಕುರಿತು ಶೆಟ್ಟಿ ಕೊಡೋದಿಲ್ಲವಂತೆ, ಕೊಡೋದಿಲ್ಲವಂತೆ, ಎಂದು ಕೂಗಿದ್ದಕ್ಕೆ, ಶೆಟ್ಟೇ, ಕೊಡ್ತೈಯ್ಯಾ ಕೊಡ್ತೈಯ್ಯಾ ಎಂದು ಅವರು ಹೇಳಿದರು. ಆ ಮಾತನ್ನು ಕೇಳಿ ಶೆಟ್ಟಿಯು ಗಂಟೆತ್ತಿ ಕೈಗೆ ಕೊಡಲು, ಆ ಕ್ಷಣದಲ್ಲೇ ಅವನು ಕಂಬಿ ಕಿತ್ತನು. ಆಗ ಉಳಿದ ಮೂರು ಮಂದಿಯು ಕೆಲಸ ಮೂರುದಾರಿ ಆರುಬಟ್ಟೆ ಆಯಿತು. ಬಳಿಕ ಸ್ವಲ್ಪ ಹೊತ್ತಿಗೆ ಆ ಮೂರು ಮಂದಿಯೂ ಸರಾಫನ ಹತ್ರಕ್ಕೆ ಓಡಿ ಬಂದು ನಮ್ಮವನೆಲ್ಲಿ? ಗಂಟವನ ಕೈಲಿ ಕೊಟ್ಟೈಯೋ? ಅದು ನಮಗೆ ನಿಮಿತ್ತವಿಲ್ಲ, ನಮ್ಮ ಗಂಟಿಗೆ ನೀನೇ ಉದಾರಣೆ ಹೇಳಬೇಕು, ಚಾವಡಿಗೆ ನಡಿ, ಎಂದು ವಿಚಾರಣೆ ಕರ್ತನ ಬಳಿಗೆ ಶೆಟ್ಟಿಯನ್ನು ಎಳ ಕೊಂಡು ಬಂದು, ತಮ್ಮ ಫಿರಿಯಾದು ಸಂಗತಿಯನ್ನೆಲ್ಲಾ ತಿಳಿಸಿದರು. ನ್ಯಾಯಾಧಿಕಾರಿಯು ಶೆಟ್ಟಿಯನ್ನು ಕರಿಸಿ ವಿಚಾರಿಸಿ ಅವನು ಮೋಸ ಹೋದನೆಂದು ತಿಳುಕೊಂಡು

ಈ ಮೂರು ಮಂದಿಯನ್ನು ನೋಡಿ ಅವಿವೇಕ ಶಿಖಾಮಣಿಗಳಿರಾ, ನೀವು ಮಾಡಿದ ನಿಗದೀ ಪ್ರಕಾರಕ್ಕೆ ನೀವು ನಾಲ್ಕು ಮಂದಿಯೂ ಕೂಡಿ ಬನ್ನಿರಿ, ನಿಮ್ಮ ಗಂಟು ಕೊಡಿಸುತ್ತೇವೆಂದು ಹೇಳಿದನು. ಆ ಮಾತಿಗೆ ಪ್ರತ್ಯುತ್ತರವಿಲ್ಲದೆ ನಾಚಿಕೆ ಪಟ್ಟು, ಈ ಮುಸಾಫರರು ಹೊರಟು ಹೋದರು.

---

## 45. THE WEALTH OF LEARNING.

### ೪೫. ವಿದ್ಯೆಯೇ ಧನ.

ಮಲಯಾಳ ದೇಶದ ಜನಾರ್ದನ ಪುರವೆಂಬ ಊರಿನಲ್ಲಿ ಇಬ್ಬರು ಸ್ನೇಹಿತರಿದ್ದರು. ಅವರಲ್ಲಿ ಒಬ್ಬನ ಹೆಸರು ಸುಮುಖನು, ಮತ್ತೊಬ್ಬನ ಹೆಸರು ಸುವಿಶೇಷನು. ಅವರು ಐಶ್ವರ್ಯವಂತರ ಮಕ್ಕಳು, ಬಾಲ್ಯದಾರಭ್ಯ ಒಬ್ಬರನ್ನೊಬ್ಬರು ಸ್ನೇಹಿಸಿ ಇದ್ದರು. ಒಂದಾನೊಂದು ದಿನ ಈ ಸಂಗಾತಿಗಳು ಆಲೋಚಿಸಿ ತಮ್ಮ ತಮ್ಮ ತಂದೆಗಳನ್ನು ನೋಡಿ ಅಯ್ಯಾ, ನಾವಿಬ್ಬರೂ ದೇಶ ಸಂಚಾರ ಮಾಡಿ ಅಲ್ಲಲ್ಲಿ ನಡಿಯುವ ನಡತೆಗಳನ್ನೂ ವರ್ತಕ ಧರ್ಮದ ಲಕ್ಷಣಗಳನ್ನೂ ತಿಳುಕೊಂಡು ವ್ಯಾಪಾರ ಮಾಡಿ ದ್ರವ್ಯವಂತರಾಗಿ ಪುನಃ ನಿಮ್ಮ ಸನ್ನಿಧಾನಕ್ಕೆ ಬರ ಬೇಕೆಂದು ಇದ್ದೇವೆ, ಹಾಗೆ ಆಶೀರ್ವದಿಸ ಬೇಕೆಂದು ವಂದಿಸಿ ನಮಸ್ಕರಿಸಿ, ಅವರ ಅಪ್ಪಣೆ ತೆಗದು ಕೊಂಡು ದಕ್ಷಿಣ ದೇಶದಿಂದ ಉತ್ತರ ದೇಶಕ್ಕೆ ಹೊರಟರು. ಆಗ ತಲಾ ಸಾವಿರ ವರಹಾದ ಹುಂಡೀ ಕಾಗದವನ್ನು ಇಲ್ಲಿನ ತಕ್ಕ ಸಾವುಕಾರರ

ಕಡೆಯಿಂದ ಕಾಶೀ ಪಟ್ಟಣದಲ್ಲಿರುವ ಸಾವುಕಾರರ ಹೆಸರಿಗೆ ಬ
ರಿಸಿ ಕೊಂಡು, ಕಂಕಳಲ್ಲಿ ಗಂಟು, ಕೈಯಲ್ಲಿ ಕೋಲು, ಹೀಗೆ
ಏಕಾಯೇಕಿ ಪ್ರಯಾಣ ನಡದು ಕೆಲವು ತಿಂಗಳಲ್ಲಿ ಕಾಶೀ ಪಟ್ಟಣ
ವನ್ನು ಸೇರಿದರು. ಸಂಗಡಲೇ ಹುಂಡೀ ಅಯಿವಜನ್ನು ಬರ
ಮಾಡಿ ಕೊಂಡು, ಉಭಯತ್ರರು ಬಂದೇ ಮನೆಯಲ್ಲಿ ಬಂ
ದೇ ಕೆಲಸವನ್ನು ಮಾಡುವದಕ್ಕೆ ಮನಸ್ಸಿಲ್ಲದೆ, ಬಬ್ಬೊಬ್ಬರು
ಬಂದೊಂದು ಮನೆಯಲ್ಲಿ ಇದ್ದುಕೊಂಡು ಸ್ನೇಹವನ್ನು ಮಾತ್ರ
ಬಿಡದೆ, ದುರ್ವ್ಯಾಪಾರಗಳಲ್ಲಿ ಪ್ರವರ್ತಿಸದೆ, ಕ್ರಿಯಾ ಶುದ್ಧಿ
ವಾಕ್ಕು ಶುದ್ಧಿಗಳು ಉಳ್ಳವರಾಗಿ ಸುಖದಿಂದಿದ್ದರು. ಅವರಲ್ಲಿ
ಸುಮುಖನೆಂಬುವನು ವರ್ತಕ ಪ್ರವರ್ತಕ ಮಾರ್ಗವನ್ನು ತಿ
ಳಿದು ವ್ಯಾಪಾರವನ್ನು ಮಾಡಿ, ಲಾಭಾದಾಯದಿಂದ ಮಹಾ ಧ
ನವಂತನೆಂದು ಮಾತಿನ ವಾಶಿಯನ್ನು ಹೊಂದಿದನು. ಸುವಿ
ಶೇಷನೆಂಬುವನು, ದ್ರವ್ಯವನ್ನು ಸಂಪಾದಿಸ ಮನಸ್ಸಿಲ್ಲದೆ, ಎ
ಲ್ಲಾ ಧನಗಳಿಗೂ ಶ್ರೇಷ್ಠವಾದ ಧನವು ವಿದ್ಯೆಯೇ ಎಂದು ಆ
ಲೋಚಿಸಿ ನಿಶ್ಚೈಸಿ, ಅಂಥಾ ವಿದ್ಯಾ ಧನವನ್ನೇ ಸಂಪಾದಿಸ ಬೇ
ಕೆಂದು, ಆ ಪಟ್ಟಣದಲ್ಲಿ ಚತುಶ್ಯಾಸ್ತ್ರ ಪಂಡಿತನೆಂಬ ಹೆಸರುಳ್ಳ ಬ
ಬ್ಬ ವಿದ್ವಾಂಸನ ಬಳಿಗೆ ಹೋಗಿ ವಿನಯದಿಂದ ಕಂಡು ನಮ
ಸ್ಕಾರ ಮಾಡಿ, ಸ್ವಾಮಿಾ, ನಾನು ದಕ್ಷಿಣ ದೇಶದಿಂದ ವಿದ್ಯಾರ್ಥಿ
ಯಾಗಿ ತಮ್ಮ ಸನ್ನಿಧಾನಕ್ಕೆ ಬಂದು ಇದ್ದೇನೆ, ಕನಿಕರಿಸಿ ನನ
ಗೆ ವಿದ್ಯಾದಾನ ಮಾಡ ಬೇಕೆಂದು ಬೇಡಿಕೊಂಡು, ತನ್ನ ಕೈಲಿದ್ದ
ಸಾವಿರ ವರಹಾಗಳನ್ನು ಆ ವಿದ್ವಾಂಸನ ಪಾದಗಳ ಮುಂದೆ ಕಾಣಿ
ಕೆಯಾಗಿ ಇಟ್ಟನು. ಆಗ ಆ ವಿದ್ವಾಂಸನು ಈ ವಿದ್ಯಾರ್ಥಿಯ
ಗುಣವನ್ನು ಅವನ ಮುಖವ ನೋಡಿದ ಮಾತ್ರದಿಂದಲೇ ತಿಳು

ಕೊಂಡು, ಎಲೈ ದಾಕ್ಷಿಣ್ಯವಂತನೇ, ನಿನ್ನ ಹೆಸರೇನೆಂದು ಕೇಳಿ ದನು. ಅವಕ್ಕವನು ಸ್ವಾಮಿಾ, ನನ್ನನ್ನು ಸುವಿಶೇಷನೆಂದು ಕರಿ ಯುತ್ತಾರೆ ಎಂದನು. ಆಗ ವಿದ್ವಾಂಸನು ನಿನಗೆ ಸುವಿಶೇಷನೆಂ ಬ ಹೆಸರು ಸಲ್ಲುವದು, ಹ್ಯಾಗಂದರೆ, ಲೋಕದಲ್ಲಿ ವಿದ್ಯಾರ್ಥಿ ಗಳು ವಿದ್ಯೆಯನ್ನೆಲ್ಲಾ ಕಲಿತ ತರುವಾಯ ಗುರು ದಕ್ಷಿಣೆ ಕೊಡು ವದು ವಿಶೇಷವು, ಕಲಿಯುವದಕ್ಕೆ ಬಂದಾಗಲೇ ನೀನು ಗುರು ದಕ್ಷಿಣೆಯನ್ನು ಕೊಟ್ಟದ್ದೇ ಸುವಿಶೇಷವು, ಎಂದು ಸಂತೋಷ ಪಟ್ಟು ತನಗೆ ಬರುವ ವಿದ್ಯೆಯನ್ನೆಲ್ಲಾ ಅವನಿಗೆ ಚನ್ನಾಗಿ ಕಲಿ ಸಿದನು. ಅವನು ಬುದ್ಧಿವಂತನಾದ್ದರಿಂದ ನಾಲ್ಕು ವರುಷದಲ್ಲಿ ನಾಲ್ಕು ಶಾಸ್ತ್ರವನ್ನು ಓದಿ ಪರಿಕ್ಷೆ ಕೊಟ್ಟು ದೊಡ್ಡ ವಿದ್ವಾಂಸ ನೆಂಬ ಹೆಸರನ್ನು ಪಡೆದನು. ಹೀಗೆ ವಿದ್ವಾಂಸನಾದ ತನ್ನ ಸ್ನೇಹಿತನ ಸಮಾಚಾರವನ್ನು ಐಶ್ವರ್ಯವಂತನಾದ ಸುಮುಖ ನು ಕೇಳಿ ಸುವಿಶೇಷನನ್ನು ಮರ್ಯಾದೆಯಿಂದ ತನ್ನ ಮನೆಗೆ ಕರಕೊಂಡು ಬಂದು ತನ್ನ ಮನೆಯಲ್ಲಿ ಆದರಿಸಿ ಇಟ್ಟು ಕೊಂಡ ನು. ಬಂದೆರಡು ವರ್ಷವಾದ ಮೇಲೆ ಸ್ವಂತ ದೇಶಕ್ಕೆ ಹೋ ಗ ಬೇಕೆಂಬ ಮನಸ್ಸು ಹುಟ್ಟಿ ಸುಮುಖನು ತಾನು ಸಂಪಾದಿಸಿದ ದ್ರವ್ಯವನ್ನೆಲ್ಲಾ ಒಂಟೆಗಳ ಮೇಲೆ ಹೇರಿಸಿ, ಸ್ನೇಹಿತನಾದ ಸುವಿ ಶೇಷನೊಡನೆ, ಕಾಶೀ ಪಟ್ಣದಿಂದ ಹೊರಟನು. ಹೀಗೆ ಹೊರ ಟು ಗೊಂಡಾರಣ್ಯ ಮಧ್ಯದಲ್ಲಿ ಬರುತ್ತಿರುವಾಗ, ಪೆಂಡಾರರೆಂಬ ಆ ದೇಶದ ಕಳ್ಳರು ಸಾವಿರಾರು ಜನ ಒಗ್ಗಟ್ಟಾಗಿ ಬಂದು ಬಿದ್ದು ಹೊಡದು ಹಣವೆಲ್ಲಾ ಸುಲುಕೊಂಡು ಹೋದರು. ಆಗ ಸು ಮುಖನಿಗೂ ಸುವಿಶೇಷನಿಗೂ ಭೇದವಿಲ್ಲದೆ ಇಬ್ಬರೂ ಬಡವರಾ ದರು. ದೋಷು ಕೊಟ್ಟು ದರಿದ್ರನಾದ ಸುಮುಖನಿಗೆ ಬಹಳ

ವ್ಯಸನ ಉಂಟಾಗಿ ತಾನು ಧನಿಕನಾಗಿ ಬಾಳಿದ ಕಾಶೀ ಪಟ್ಟಣಕ್ಕೂ ಕೆಂದೆ ಇರುವ ಜನಾರ್ದನ ಪುರಕ್ಕೂ ಈ ಹೀನ ದಶೆಯಲ್ಲಿ ಪುನಃ ಹೋಗುವದಕ್ಕೆ ಮನಸ್ಸಿಲ್ಲದೆ ದುಃಖ ಪಡುತ್ತಾ ಇದ್ದನು. ಅವನನ್ನು ನೋಡಿ ಸುವಿಶೇಷನು, ಎಲೈ ಸುಮುಖನೇ, ನೀನು ಕಳ್ಳರಿಂದ ಕದಿಯಲ್ಪಡುವ ಧನವನ್ನು ಸಂಪಾಸಿದಿ, ನಾನು ಕಳ್ಳರು ಅಪಹರಿಸ ಕೂಡದ ವಿದ್ಯಾಧನವನ್ನು ಸಂಪಾದಿಸಿದ್ದೇನೆ ಇದರಿಂದ ನಿನ್ನನ್ನು ಪುನಃ ಧನವಂತನಾಗಿ ಮಾಡುತ್ತೇನೆ, ಯೋಚನೆ ಮಾಡ ಬೇಡವೆಂದು ಸಮಾಧಾನ ಪಡಿಸಿ, ಇಬ್ಬರೂ ಕಾಲು ನಡೆಯಿಂದಲೇ ಉಜ್ಜಿನೀ ಪಟ್ಟಣಕ್ಕೆ ಬಂದರು. ಆಮೇಲೆ ಸುವಿಶೇಷನು ಆ ಪಟ್ಟಣವಾಳುವ ಬದ್ಧನೇಂದ್ರ ರಾಯನೆಂಬ ಅರಸನ ಬಳಿಗೆ ಹೋಗಿ ರಾಜ ಸಭೆಯನ್ನು ಪ್ರವೇಶಿಸಿ ತನ್ನ ಪಾಂಡಿತ್ಯವನ್ನು ಸಂಪೂರ್ಣವಾಗಿ ಪ್ರಕಟನೆ ಮಾಡಲು, ಅಕ್ಷರ ಪಕ್ಷಪಾತಿಯಾದ ಆ ಪ್ರಭುವು ಸುವಿಶೇಷನನ್ನು ಬಹುಮಾನಿಸಿ, ಅವನಿಗೆ ಅನೇಕ ದ್ರವ್ಯವನ್ನು ಕೊಟ್ಟನು. ಆದೇ ದ್ರವ್ಯದಿಂದ ಈ ಉಭಯತ್ರರೂ ಐಶ್ವರ್ಯವಂತರಾಗಿ ಸ್ವಂತ ಪಟ್ಟಣವನ್ನು ಶೇರಿ ಸುಖದಿಂದಿದ್ದರು. ಈ ಮೇರೆಗೆ ವಿದ್ವಾಂಸರು ಸುಖ ಪಡುವರು.

---

## 46. THE DEMON ON THE FIG TREE.

### ೪೬. ಅರಳೀ ಮರದ ದೆವ್ವ.

ಒಂದು ಊರಿನಲ್ಲಿ ಒಬ್ಬ ಬ್ರಾಹ್ಮಣನುಂಟು. ಅವನು ಭಿಕ್ಷಗಾರನಾದ್ದರಿಂದ ಆ ಊರೆಲ್ಲಾ ತಿರಿಗಿ ಭಿಕ್ಷವೆತ್ತಿದ ಅಕ್ಕಿಯನ್ನು

ತಂದು ಹೆಂಡತಿಯ ಕೈಲಿ ಕೊಡುವನು. ಅವಳು ಅದನ್ನು ಅಡಿಗೆ ಮಾಡಿ ಗಂಡನ ಎಲೆಗೆ ಬಡಿಸಿ ಸಂಗಡಲೇ ಕಸಪ್ರೊರಿಕೆಯಿಂದ ಗಂಡನನ್ನು ಒಂದು ಪೆಟ್ಟು ಹೊಡೆಯುವಳು. ನಿತ್ಯವೂ ಈ ಪ್ರಕಾರ ಹೆಂಡತಿಯ ಕೈಲಿ ಪೊರಕೆ ಪೆಟ್ಟು ತಿಂದು ಆಗ್ಯೆ ಮಾತ್ರ ದುಃಖ ಪಡುತ್ತಾ ತನ್ನ ಕಟ್ಲೇ ಪ್ರಕಾರ ಭಿಕ್ಷ ಬೇಡಿ ಸಂಸಾರ ಮಾಡುತ್ತಾ ಇರುವನು. ಹೀಗೆ ಬಹಳ ದಿವಸದಿಂದ ಪೆಟ್ಟು ತಿಂದು ಬೇಸತ್ತು, ಆ ಬ್ರಾಹ್ಮಣನು ನಾಲ್ಕಾರು ದಿವಸ ಪರಸ್ಥಳಕ್ಕಾದರು ಹೋಗಿ ಇರಬೋಣವೆಂದು ಆಲೋಚಿಸಿ, ಹೆಂಡತಿಯನ್ನು ನೋಡಿ ನಾನು ಗ್ರಾಮಾಂತರಕ್ಕೆ ಹೋಗಿ ಬರುತ್ತೇನೆ, ಎಂಟು ದಿವಸದ ಅಕ್ಕಿ ಮನೆಯಲ್ಲಿ ಉಂಟು. ನೆಮ್ಮದಿಯಾಗಿ ಉಂಡುಕೊಂಡು ಇರು, ಅಯಿದಾರು ದಿವಸದಲ್ಲಿ ಬರುತ್ತೇನೆಂದು ಹೇಳಿದನು. ಆ ಮಾತನ್ನು ಕೇಳಿ, ಹೆಂಡತಿಯು ನೀನು ಆರು ದಿವಸದ ವರಿಗೂ ಬಾರದೆ ಇದ್ದರೆ ನನ್ನ ಕೈಯಿಂದ ಪೊರಕೆ ಪೆಟ್ಟುಗಳ ತಿನ್ನುವವರ್ಯಾರು ? ಅದಕ್ಕೊಬ್ಬನನ್ನು ಗೊತ್ತು ಮಾಡಿ ನೀನೆಲ್ಲಿಗಾದರು ಹೋಗೆಂದಳು. ಬ್ರಾಹ್ಮಣನು ಬಹು ತೊಂದರೆ ಬಂತಲ್ಲಾ ಏನು ಮಾಡಲೆಂದು ಯೋಚಿಸಿ, ತಾನು ಬೆಳಸಿದ ಅರಳೀ ಮರವನ್ನು ತನಗೆ ಬದಲಾಗಿ ಪೊರಕೇಲಿ ಹೊಡಿಯುತ್ತಿರು ಎಂದು ಹೇಳಿ ಬಿಟ್ಟು ಹೊರಟು ಹೋದನು. ಆ ಗಯ್ಯಾಳಿ ಹೆಂಗಸು ಆ ದಿವಸ ಯಥಾಪ್ರಕಾರ ಅಡಿಗೆ ಮಾಡಿ ಹಿತ್ತಲಲ್ಲಿರುವ ಅರಳೀ ಮರದ ಮುಂದೆ ತನ್ನ ಗಂಡನಿಗೆ ಬಡಿಸುವ ಪ್ರಕಾರ ಎಲೇ ಹಾಕಿ ಬಡಿಸಿ, ಪೊರಕೆಯನ್ನು ಕೈಲಿ ತೆಕ್ಕೊಂಡು ಇಗೋ ಮನುಷ್ಯನಿಗೆ ಒಂದು ಪೆಟ್ಟು ಮರಕ್ಕೆ ಮೂರು ಪೆಟ್ಟು ಎಂದು ಹೊಡೆಯಲು, ಆ ಮರದಲ್ಲಿ ಬಹಳ ದಿವಸ

ದಿಂದ ವಾಸವಾಗಿದ್ದ ಭೂತವು ಆ ಪೆಟ್ಟು ತಿನ್ನಲಾರದೆ, ಬ್ರಾಹ್ಮಣನು ಇದ್ದ ಬಳಿಗೆ ಓಡಿ ಹೋಗಿ ಎಲೈ ಬ್ರಾಹ್ಮಣನೇ, ನನ್ನನ್ನು ನಿನ್ನ ಹೆಂಡತಿಯು ಪ್ರೇತಕೇ ಪೆಟ್ಟಿಗೆ ಗುರಿ ಮಾಡಿ ಬರ ಬಹುದೇ? ಒಂದು ದಿವಸದ ಪೆಟ್ಟಿಗೆ ನಾನು ತಾಳಲಾರದೆ ಹೋದೆನಲ್ಲಾ, ನೀನು ನಿತ್ಯವೂ ಇಂಥಾ ಪೆಟ್ಟುಗಳು ಹ್ಯಾಗೆ ತಿನ್ನುತ್ತೀ? ಅಯ್ಯೋ! ಪಾಪವೇ! ಎಂದು ಪಶ್ಚಾತ್ತಾಪ ಪಟ್ಟು ಕನಿಕರಿಸಿ, ಇನ್ನು ಮೇಲೆ ಈ ಪೆಟ್ಟು ನೀನು ತಿನ್ನದ ಹಾಗೆ ಒಂದು ಉಪಾಯವನ್ನು ಹೇಳುತ್ತೇನೆ ಕೇಳು, ನಾನು ಈ ಸೋಳಾಪುರದ ಅರಸನ ಹೆಂಡತಿಯನ್ನು ಹಿಡಿದು ಬಹಳ ತೊಂದರೆ ಪಡಿಸುತ್ತೇನೆ, ಆಗ ಮಂತ್ರಗಾರರು ಬಹಳ ಮಂದಿ ಬಂದು ಮಂತ್ರಿಸಿದಾಗ್ಯೂ ಬಿಟ್ಟು ಹೋಗದೆ, ಫಲಾನಾ ಊರಿನಲ್ಲಿ ಫಲಾನಾ ಬ್ರಾಹ್ಮಣನು ಇದ್ದಾನೆ, ಆತನ ಹೆಸರು ಮಂತ್ರ ಮೂರ್ತಿ ಸುಬ್ಬಾವಧಾನಿ, ಆತನನ್ನು ಕರಿಸಿದರೆ ನಾನು ಬಿಟ್ಟು ಹೋಗುವೆನೆಂದು ಅರಸನಿಗೆ ಹೇಳುತ್ತೇನೆ, ಅಷ್ಟು ಮಾತ್ರದಿಂದಲೇ ನಿನ್ನನ್ನು ಕರಿಸಿ ನಿನ್ನ ಕಡೆಯಿಂದ ನೆಮ್ಮದಿ ಹೊಂದಿದ ಹೆಂಡತಿಯನ್ನು ನೋಡಿ ಸಂತೋಷಿಸಿ, ನಿನ್ನ ದರಿದ್ರವನ್ನು ಹೋಗಲಾಡಿಸುವನು, ಈ ದರಿದ್ರದೋಷದಿಂದಲೇ ಹೆಂಡತಿಯ ಕೈಲಿ ಗಂಡನು ಅವಮಾನ ಪಡುವದು, ಆದರೆ ನಿನಗೆ ಕೈಪೆಟ್ಟು ಬೀಳುತ್ತದೆ, ಕಡಿಮೆಯವರಿಗೆಲ್ಲಾ ಬಾಯಿ ಮಾತಿನಿಂದಲೇ ಈ ಪೆಟ್ಟಿಗೆ ಸಮಾನವಾದ ಅವಮಾನ ಉಂಟಾಗುತ್ತದೆ, ಎಂತ ನುಡಿದು, ತಕ್ಷಣದಲ್ಲಿ ಹೋಗಿ ಅರಸನ ಹೆಂಡತಿಯನ್ನು ಹಿಡಿದು ತೊಂದರೆ ಪಡಿಸಿತು. ಅನೇಕ ಮಂತ್ರಗಾರರಿಗೆ ಅಸಾಧ್ಯವಾದ ತರುವಾಯ, ಅರಸನು ಈ ಬ್ರಾಹ್ಮಣನನ್ನು ಆ ಭೂತದ ಮಾತಿನ ಪ್ರಕಾರ ಕರಿಸಿ ತನ್ನ ಹೆಂಡತಿಯ ವೃತ್ತಾಂತವನ್ನು ತಿಳಿಸಿದ

ನು. ಬ್ರಾಹ್ಮಣನು ಅರಸ್ತ್ರಿಯ ಮುಂದೆ ನಿಂತ ಕೂಡ್ಲೇ ಆಕೆಯ ನ್ನು ಭೂತವು ಬಿಟ್ಟು ಹೋಗುವಾಗ, ಅದು ಎಲೈ ಬ್ರಾಹ್ಮಣನೇ, ಈ ದಿನವೇ ಸರಿ, ಇನ್ನು ಮೇಲೆ ನಾನಿದ್ದ ಕಡೆ ನೀನು ಬಂದರೆ ಕೊಂದು ಹಾಕುವೆನು ಎಂದು ಹೇಳಿ ಹೋಯಿತು. ಸಂಗಡಲೇ ಅರಸ್ತ್ರಿಗೆ ಆರೋಗ್ಯವಾದ್ದನ್ನು ನೋಡಿ ಅರಸನು ಸಂತೋಷ ಪಟ್ಟು, ಬ್ರಾಹ್ಮಣನಿಗೆ ಬಹುಮಾನ ಮಾಡಿದ್ದಲ್ಲದೆ, ತಿಂಗಳಿಗೆ ಹತ್ತು ವರಹಾ ಸಂಬಳ ಸಹ ಮಾಡಿ ಅವನನ್ನು ತನ್ನಲ್ಲೇ ಇಟ್ಟುಕೊಂಡನು. ಆಮೇಲೆ ಅವನಿಗೆ ಪ್ರೊರಕೇ ಪೆಟ್ಟು ತಪ್ಪಿತು. ಬಳಿಕ ಭೂತವು ಆ ಅರಸನ ಮಂತ್ರಿಯ ಹೆಂಡತಿಯನ್ನು ಬಾಧಿಸಲಾರಂಭಿಸಿತು. ಆ ವರ್ತಮಾನ ರಾಯನಿಗೆ ತಿಳಿದ ಕೂಡಲೇ, ರಾಯನು ಅಯ್ಯಾ ಮಂತ್ರಮೂರ್ತಿ ಸುಬ್ಬಾವಧಾನಿಗಳೇ, ನೀವು ನನ್ನ ಮಂತ್ರಿಯ ಮನೆಗೆ ಹೋಗಿ ಅವನ ಹೆಂಡತಿಗೆ ಉಂಟಾದ ಉಪದ್ರವವನ್ನು ಪರಿಹರಿಸಿ ಬನ್ನಿರೆಂದು ಕಳುಹಿಸಿದನು. ಅದೇ ಪ್ರಕಾರ ಬಂದ ಬ್ರಾಹ್ಮಣನನ್ನು ನೋಡಿ ಭೂತವು ಇಲ್ಲಿಗೆ ಯಾತಕ್ಕೆ ಬಂದಿ? ಎಂದು ಕೋಪದಿಂದ ಗದರಿಸಲು, ಬ್ರಾಹ್ಮಣನು, ಅಯ್ಯಾ ಭೂತರಾಜನೇ, ನನ್ನ ಹೆಂಡತಿಯು ಪ್ರೊರಕೇ ತೆಕ್ಕೊಂಡು ಬಂದು ಬೀದಿಯಲ್ಲಿ ನಿಂತಿದ್ದಾಳೆ, ಈ ವರ್ತಮಾನವನ್ನು ನಿನಗೆ ತಿಳಿಸುವದಕ್ಕೆ ಬಂದೆನೆಂದು ಹೇಳಿದನು. ಆ ಮಾತು ಕೇಳಿದ ಮಾತ್ರದಲ್ಲೇ ಭೂತವು ಭಯ ಪಟ್ಟು ಓಡಿ ಹೋಯಿತು. ಮಂತ್ರಿಯ ಹೆಂಡತಿಗೂ ಆರೋಗ್ಯವಾಯಿತು. ಹೀಗೆ ಮಂತ್ರ ವಿದ್ಯೆಗಳನ್ನು ಕಲಿತವರಿಗೆ ತಂತ್ರ ವಿದ್ಯೆ ಸಹ ತಿಳಿದಿರ ಬೇಕು.

## 47. THE CANARESE MAN AND THE TELUGU MAN.

### ೪೭. ಕನ್ನಡಿಗನೂ ತೆಲುಗನೂ.

ದಕ್ಷಿಣ ದೇಶದಲ್ಲಿ ಇರುವ ಒಬ್ಬ ಕನ್ನಡಿಗನು ಆ ದೇಶದಲ್ಲಿ ತನಗೆ ಜೀವನೋಪಾಯವೇನೂ ಶಿಕ್ಕದೆ ಬಹಳ ದಿವಸ ಪೇಚಾಡಿ ಉತ್ತರ ದೇಶಕ್ಕಾದರು ಹೋಗಿ ಕೂಲಿ ನಾಲಿ ಮಾಡಿ ಹೊಟ್ಟೆ ಹೊರ ಕೊಳ್ಳ ಬೇಕೆಂದು ನೆನಸಿ ಹೊರಟನು. ಅವನು ಮಾರ್ಗದಲ್ಲಿ ಬರುತ್ತಾ ಬರುತ್ತಾ ಗದ್ದವಾಲ ಸುರಪುರ ಪ್ರಾಂತ್ಯಕ್ಕೆ ಬಂದು ಛತ್ರದಲ್ಲಿ ಅಶನಕ್ಕೋಸ್ಕರ ನಿಂತನು. ಇದೇ ಪ್ರಕಾರ ಉತ್ತರ ದೇಶಸ್ಥನಾದ ಒಬ್ಬ ತೆಲುಗರವನು ತನ್ನ ದೇಶದಲ್ಲಿ ಕಾಲಕ್ಷೇಪ ನಡಿಯದೆ, ಅನ್ಯ ದೇಶಕ್ಕಾದರೂ ಹೋಗಿ ಕೂಲಿ ನಾಲಿ ಮಾಡಿ ಕೊಂಡು ಜೀವಿಸ ಬೇಕೆಂದು ಹೊರಟು ಬರುತ್ತಾ ಮಾರ್ಗದಲ್ಲಿ ಈ ಕನ್ನಡಿಗನು ಇಳಿದಿರುವ ಛತ್ರಕ್ಕೆ ಅಶನಕ್ಕೋಸ್ಕರ ಬಂದು ನಿಂತನು. ಛತ್ರದಲ್ಲಿ ಮೂರು ಝಾವಕ್ಕೋ ಸಾಯಂಕಾಲಕ್ಕೋ ಶಿಕ್ಕಿದ ಛತ್ರದ ಕೂಳನ್ನು ತಿಂದು ಕೈಕಾಲು ಶೆಳವಿನ ಆಯಾಸದಿಂದ ಆ ದಿವಸ ಮುಂದಕ್ಕೆ ನಡದು ಹೋಗಲಾರದೆ ಆವನು ಆ ರಾತ್ರಿ ಅಲ್ಲೇ ಮಲಗಿದನು. ಬೆಳಗಾದ ಮೇಲೆ ಪ್ರಯಾಣ ಹೊರಡುವ ಸಮಯದಲ್ಲಿ ಕನ್ನಡಿಗನು ತೆಲುಗನನ್ನು ನೋಡಿ, ನೀನು ಎಲ್ಲಿಗೆ ಹೋಗುತ್ತೀ? ಎಂದು ಎರಡು ಮೂರು ಸಾರಿ ಕೇಳಿದನು. ಕನ್ನಡ ಮಾತು ತಿಳಿಯದೆ ತೆಲುಗನು ಸುಮ್ಮನಿದ್ದನು. ಕನ್ನಡಿಗನು ಯಾಕೆ ಸುಮ್ಮಗಿದ್ದೀಯೆ? ಮಾತಾಡು ಅಂದನು. ಆಗ ತೆಲುಗನು ಅಡ್ಡದ

ಕಾಸು ಕೊಟ್ಟು ಅಜ್ಜಿಗೆ ಬೇಕಾದ ದೊಡ್ಡ ಹಗ್ಗವನ್ನು ತೆಗದು ಸುತ್ತಿಟ್ಟು ಕೊಂಡಿದ್ದನಾದ ಕಾರಣ ಅದನ್ನು ಕನ್ನಡಿಗನು ತನ್ನ ಹಗ್ಗವೆಂತ ಹೇಳುತ್ತಾನೆಂದು ಅತಿ ಕೋಪದಿಂದ ಹಗ್ಗಾ ಕೈಗೆ ತೆಕ್ಕೊಂಡನು. ಹಗ್ಗದಿಂದ ತನ್ನನ್ನು ಹೊಡಿಯುತ್ತಾನೆಂದು ನೆನಸಿ ಕನ್ನಡಿಗನು ಆ ಹಗ್ಗವನ್ನು ಭದ್ರವಾಗಿ ಹಿಡುಕೊಂಡು, ಮಾತಾಡು ಅಂದರೆ ಹೊಡಿಯುವದಕ್ಕೆ ಬರುತ್ತೀಯಾ ? ಅಂದನು, ತನ್ನ ಹಗ್ಗವನ್ನು ಕಸುಕೊಳ್ಳುತ್ತಾನೆಂದು ತೆಲುಗರವನು ಹಿಂದಕ್ಕೆ ಗುಂಜಿದನು. ಹೀಗೆ ಹಗ್ಗ ಹೋಗುತ್ತದೆ ಎಂಬ ದುಃಖ ತೆಲುಗರವನಿಗೂ ಹಗ್ಗದ ಪೆಟ್ಟು ಬೀಳುತ್ತದೆ ಎಂಬ ಭಯ ಕನ್ನಡಿಗನಿಗೂ ಉಂಟಾಗಿ ಹಗ್ಗವನ್ನು ಇಬ್ಬರೊಳಗೆ ಒಬ್ಬನಾದರೂ ಬಿಡದೆ ಹಿಗ್ಗಾ ಮುಗ್ಗಾ ಎಳದಾಡಿ ವ್ಯಾಜ್ಯವಾಡುತ್ತಾ ಇದ್ದರು. ಆಗ ತೆಲುಗು ಕನ್ನಡ ಭಾಷೆಗಳನ್ನು ತಿಳಿದ ಒಬ್ಬ ಮಾರ್ಗಸ್ಥನು ಈ ಸಂಗತಿಯನ್ನು ನೋಡಿ ತಿಳಿಯದೆ ಯಾಕೆ ವ್ಯಾಜ್ಯ ಮಾಡುತ್ತೀರಿ? ಎಂದು ಸಮಾಧಾನ ಪಡಿಸಿದನು. ಆ ಮೇಲೆ ಇವರಿಬ್ಬರು ದೇಶಾಂತ್ರದ ಪ್ರಯಾಣವನ್ನು ಬಿಟ್ಟು ಸ್ವದೇಶಗಳಿಗೆ ತಿರಿಗಿದರು. ಪ್ರಯಾಣಸ್ಥರಿಗೆ ತಾವು ಸಂಚರಿಸುವ ದೇಶ ಭಾಷೆಗಳು ತಿಳಿಯದಿದ್ದರೆ ಹೀಂಗೆ ಅನರ್ಥ ಉಂಟಾಗುತ್ತದೆ.

---

## 48. KRISHNA RAYA AND APPAJI.

## ೪೮. ರಾಯರೂ ಅಪ್ಪಾಜಿಯೂ.

ಮಂತ್ರಿ ಶ್ರೇಷ್ಠನಾದ ಅಪ್ಪಾಜಿಯೊಡನೆ ನರಪತಿ ಕೃಷ್ಣರಾಯನು ರಾಜ್ಯವನ್ನಾಳುತ್ತಾ ಇರುವಾಗ ನೂರಾಳು ನೂರು

ಕುದುರೆ ಹೊಸದಾಗಿ ಲಾಯಕ್ಕೆ ಸೇರದೆ ಇರುವ ದಿವಸ ಬಂದಾದರು ಇಲ್ಲವ ಹಾಗೆ ದಿನೆ ದಿನೆ ಸೈನ್ಯವನ್ನು ಹೆಚ್ಚಿಸುತ್ತಾ ದೊಡ್ಡ ದಂಡು ಶೇರಿಸಿ, ಆ ದಳವನ್ನು ತನ್ನ ರಾಜ್ಯದಲ್ಲಿ ಸ್ಥಲ ದುರ್ಗಗಳು ಅಂದರೆ ನೆಲಕೋಟೆಗಳು, ಜಲದುರ್ಗಗಳು ಅಂದರೆ ಸಮುದ್ರದ ಟಾಪುಗಳು, ಗಿರಿದುರ್ಗಗಳು ಅಂದರೆ ಬೆಟ್ಟದ ಕೋಟೆಗಳು, ಮುಂತಾದ ಸ್ಥಳಗಳಲ್ಲಿ ಹಂಚಿಕೆ ಪ್ರಕಾರಕ್ಕೆ ನೆಲೆಯಾಗಿರುವ ಹಾಂಗೆ ವಿಂಗಡಿಸಿದ್ದಲ್ಲದೆ, ರಾಯನ ಬಳಿಲಿ ಮೇಗಾವಲಿಗೆ ಸಹ ಬೇಕಾದಷ್ಟನ್ನು ಇಟ್ಟುಕೊಂಡಿದ್ದನು. ಈ ಸೈನ್ಯಗಳ ಮೇಲೂ ಸೇನಾಧಿಪತಿಗಳ ಮೇಲೂ ಮಂತ್ರಿಶೇಖರನಾದ ಅಪ್ಪಾಜಿಯ ವಿಚಾರಣೆ ಪರಿಪೂರ್ಣವಾಗಿರುವದು. ಹೀಗಿರುವಲ್ಲಿ ರಾಜ್ಯದ ಹುಟ್ಟುವಳಿಯ ಹಣ ದಂಡಿನ ಸಂಬಳದ ಬಟವಾಡೆಗೆ ಸರಿಯಾಗುವದಲ್ಲದೆ ದಾನಧರ್ಮ ಬಹುಮಾನ ಸನ್ಮಾನ ಮುಂತಾದವುಗಳ ಮಾಡತಕ್ಕ ಬಗ್ಯೆ ಸಾಲದೆ ಇರುವದನ್ನು ರಾಯನು ತಿಳಿದು ಮಂತ್ರಿಯನ್ನು ನೋಡಿ ಇಂತೆಂದನು; ಅಪ್ಪಾಜೀ, ಹೊಳೇ ದಾಟದ ಮೇಲೆ ಅಂಬಿಗರ ಸ್ನೇಹವಿರ ಬೇಕೋ ? ವಿದ್ಯವನ್ನು ಕಲಿತ ಮೇಲೆ ಉಪಾಧ್ಯನ ಮಠಕ್ಕೆ ನಿತ್ಯವೂ ಹೋಗ ಬೇಕೋ ? ಜಾಡ್ಯ ಹರಿದ ಮೇಲೆ ವೈದ್ಯನು ಹತ್ರದಲ್ಲೇ ಕೂತಿರ ಬೇಕೋ ? ಕೆಲಸವಿಲ್ಲವಷ್ಟೆ, ಹೀಗೆಯೇ ಸಕಲ ರಾಜ್ಯಗಳೂ ಸ್ವಾಧೀನವಾಗಿ ಪರರಾಯರೆಲ್ಲರೂ ನಮಗೆ ಪಾದಾಕ್ರಾಂತರಾಗಿ ಇರುವಲ್ಲಿ, ಶೀಮೆಯ ಹಣವೆಲ್ಲಾ ಸಂಬಳಕ್ಕೆ ಸರಿ ಹೋಗುವ ಈ ದೊಡ್ಡ ಸೈನ್ಯದಿಂದ ಪ್ರಯೋಜನವೇನು? ದಾನ ಧರ್ಮಾದಿಗಳನ್ನು ವಿಶೇಷವಾಗಿ ಮಾಡಿ ಪುಣ್ಯ ಕೀರ್ತಿಗಳನ್ನು ಹೆಚ್ಚಾಗಿ ಸಂಪಾದಿಸುವದು ಒಳ್ಳೇದಲ್ಲವೋ?

ದಿನಚರಿಯೂ ಭರ್ತಿ ಮಾಡುವ ಸೈನ್ಯದ ಕೆಲಸವನ್ನು ನಿಲ್ಲಿಸಿ ಬಿಡುವದಲ್ಲದೆ ನೆಲೆಯಾದ ಸೈನ್ಯದ ಹದಿನಾರು ಪಾಲಿನಲ್ಲಿ ಒಂದು ಪಾಲನ್ನು ನಿಲ್ಲಿಸಿ ಕೊಂಡು ಮಿಕ್ಕ ಹದಿನೈದು ಪಾಲು ಸೈನ್ಯವನ್ನು ತೆಗದು ಹಾಕಿ ಅವಕ್ಕೆ ತಿಂಗಳಗಟ್ಲೆ ಸಲ್ಲತಕ್ಕ ಸಂಬಳದ ಹಣವನ್ನು ಬೊಕ್ಕಸದಲ್ಲಿ ಸೇರಿಸಿ ಅದರಿಂದ ದಾನ ಧರ್ಮ ಪರೋಪಕಾರಾದಿಗಳನ್ನು ಮಾಡ ಬಾರದೋ? ಎಂದು ಹೇಳಿದನು. ಆ ಮಾತನ್ನು ಕೇಳಿ ಅಪ್ಪಾಜಿ ಸ್ವಲ್ಪ ಹೊತ್ತು ಚಿಂತಿಸಿ ರಾಯನನ್ನು ಕುರಿತು ಮಹಾ ಪ್ರಭುವೇ, ಆಜ್ಞಾಧಾರಕನ ಬಿನ್ನಹವನ್ನು ಚಿತ್ತಕ್ಕೆ ತರ ಬೇಕು, ಬಹುಕಾಲದಿಂದ ಇರುವ ಸೈನ್ಯವನ್ನು ದಿನದಿನಕ್ಕೂ ಹೆಚ್ಚಿಸ ಬೇಕಲ್ಲದೆ ತೆಗದು ಹಾಕ ಕೂಡದು, ಸೈನ್ಯ ಸಂವೃದ್ಧಿ ಭಯದಿಂದಲೇ ಅನೇಕ ಪರರಾಯರು ಪಾದಾಕ್ರಾಂತರಾದ್ದು, ಇಂಥಾ ಸೈನ್ಯವನ್ನು ತೆಗದು ಹಾಕಿದ ತಕ್ಷಣದಲ್ಲೇ ಪರರಾಯರ ಸಮೂಹ ಯುದ್ಧಕ್ಕೆ ಸಿದ್ಧವಾಗುವದು, ನಮ್ಮಲ್ಲಿ ಇದ್ದ ಸೈನ್ಯವೇ ಅವರಲ್ಲಿ ಸೇರಿ ಎದುರು ಬೀಳುವದು, ಯುದ್ಧ ಸಮಯಕ್ಕೆ ಹೊಸದಾಗಿ ಸೈನ್ಯವನ್ನು ಕೂಡಿಸ ಕೂಡದು, ದಿವ್ಯ ಚಿತ್ತಕ್ಕೆ ತಂದು ಸೈನ್ಯವನ್ನು ಹೆಚ್ಚಿಸ ಬೇಕೇ ಹೊರ್ತು ತೆಗದು ಹಾಕಲಾಗದು, ಎಂದು ಹೇಳಿದನು. ರಾಯನು ಅಂಥಾ ಯುದ್ಧ ಪ್ರಸಕ್ತಿ ಉಂಟಾದಾಗ ಬೇಕಾದಷ್ಟು ಸೈನ್ಯ ಕೂಡಿಸ ಬಹುದು ಅಂದನು. ಅದಕ್ಕೆ ಅಪ್ಪಾಜಿಯು ಸಕ್ಕರೆಯ ರಾಶಿ ಇದ್ದಾಗ್ಯೂ ರಾತ್ರಿಯಲ್ಲಿ ನೊಣಗಳು ಮುಚ್ಚುವದಿಲ್ಲ, ಅದೇ ಮೇರೆಗೆ ಹೊಸ ಸೈನ್ಯಗಳು ಸಮಯಕ್ಕೆ ಒದಗಲಾರವು ಅಂದನು. ರಾಯನು ಅಗಳುಗಳು ಚಲ್ಲಿದರೆ ಕಾಗೆಗಳು ಕೂಡುವಕ್ಕೆ ಅಡ್ಡಿ ಏನು ? ಎಂದು ಹೇ

ಳಿದನು. ಅದಕ್ಕೆ ಬಾಯಿ ಮಾತಿನ ದೃಷ್ಟಾಂತ ಸಾಲದೆಂದು ತಿಳಿದು ಮಂತ್ರಿ ಸರ್ವಜ್ಞ ಚಿತ್ತನೆಂದು ಸುಮ್ಮನಾದನು. ಈ ಮೇರೆಗೆ ಅಪ್ಪಾಜಿಯು ಒಡಂಬಡದೆ ಇದ್ದಾಗ್ಯೂ ಇನ್ನೂ ಕೆಲವು ದಿವಸದ ಮೇಲೆ ಒಡಂಬಡಿಸಿ, ಆಲೋಚಿಸಿದ ಕಾರ್ಯವನ್ನು ನೆರವೇರಿಸ ಬೇಕೆಂದು ರಾಯನಿದ್ದನು. ರಾಯನ ಇಂಗಿತವನ್ನು ತಿಳಿದು, ಇನ್ನೊಂದು ಸಾರಿ ತನ್ನ ಸಂಗಡ ರಾಯನು ಆಲೋಚಿಸುವದಕ್ಕೆ ಮುಂಚಿತವಾಗಿಯೇ ಈ ಕಾರ್ಯವ ನಿಲ್ಲಿಸಿ ಬಿಡ ಬೇಕೆಂದು ನೆನಸಿದ ಅಪ್ಪಾಜಿಯು ಚೈತ್ರ ಪೌರ್ಣಮಿಯ ಔತನಕ್ಕಾಗಿ ರಾಯನನ್ನು ತನ್ನ ಮನೆಗೆ ಕರದುಕೊಂಡು ಬಂದು, ಭೋಜನೋತ್ತರದಲ್ಲಿ ಸಾಯಂಕಾಲದ ವರಿಗೂ ಮಹಾ ರಾಜೋಪಚಾರಗಳ ನಡಿಸಿ, ರಾತ್ರಿ ಝಾಮು ಹೊತ್ತಿನ ತನಕ ತನ್ನ ಮನೆಯ ಬಿಸಲು ಮಹಡಿಯ ಮೇಲೆ ಸಂಗೀತ ಸಾಹಿತ್ಯ ನಾಟ್ಯ ಮೊದಲಾದ ವಿನೋದಗಳಿಂದ ಹೊತ್ತು ಹೋಗಲಾಡಿಸಿ, ಆ ಪೂರ್ಣ ಚಂದ್ರನ ಬೆಳದಿಂಗಳಲ್ಲಿ ರಾಯನು ಸಂತೋಷ ಭರಿತನಾಗಿ ಕುಳಿತಿರುವಾಗ, ಹತ್ತೆಂಟು ದೊಡ್ಡ ದೊಡ್ಡ ಬರಾತಗಳಲ್ಲಿ ಅನ್ನಗಳ ತುಂಬಿಸಿ ರಾಯನ ಮುಂದೆ ವರಶೆಯಾಗಿ ಇಡಿಸಿದನು. ಇದೇನೆಂದು ರಾಯನು ಕೇಳಲು, ಅಪ್ಪಣೆ ಆದರೆ ಅಗಳು ಚಲ್ಲಿಸುತ್ತೇನೆ, ಕಾಗಿಗಳ ಗುಂಪು ಕೂಡುವ ಪ್ರಕಾರಕ್ಕೆ ಹುಕುಂ ಆಗ ಬೇಕೆಂದು ಅಪ್ಪಾಜಿ ನುಡಿದನು. ಆ ಮಾತು ಕೇಳಿ ಮಹಾರಾಯನು ಅಪ್ಪಾಜೀ, ಆರು ತಿಂಗಳಿಗೆ ಮುಂಚಿತವಾಗಿ ನಾವು ಹೇಳಿದ ಮಾತಿಗೆ ಇದು ದೃಷ್ಟಾಂತವೋ! ಎಂದು ಸಂತೋಷ ಪಟ್ಟು, ಯಥಾಪ್ರಕಾರವಾಗಿ ಸೈನ್ಯವನ್ನು ಅಭಿವೃದ್ಧಿ ಮಾಡೆಂದು ಆಜ್ಞಾಪಿಸಿದನು. ಮಹಾ ಮಂತ್ರಿಗಳ ಆಲೋಚನೆ ಹೀಂಗೆ ಇರುತ್ತದೆ.

## 49. THE MERCHANT AND SERVANT.

### ೪೯. ಬಣಜಿಗನೂ ಆಳೂ.

ಮೈಲಾರ ಶೆಟ್ಟಿ ಎಂಬ ಬಣಜಿಗನು ವ್ಯಾಪ್ಯಾರ ಸಾಹಸ ಮಾಡಿ ಹಣ ಸಂಪಾದಿಸ ಬೇಕೆಂದು ದೇಶಾಂತರಕ್ಕೆ ಹೋದನು. ಅಲ್ಲಿ ಅರಳೆ ಚಕ್ಕಿನ ವ್ಯಾಪಾರದಿಂದ ಸಾವಿರಾರು ವರಹಾ ಸಂಪಾದಿಸಿ, ಅದನ್ನು ಭದ್ರ ಪಡಿಸುವದು ಕಷ್ಟವೆಂದು "ಹತ್ತು ಕಟ್ಟುವ ಕಡೆ ಒಂದು ಮುತ್ತು ಕಟ್ಟು" ಎಂಬ ಸಾಮತಿಯನ್ನು ನೆನಸಿ, ಕೈಲಿದ್ದ ನಾಲ್ಕಾರು ಸಾವಿರ ರೂಪಾಯನ್ನು ಕೊಟ್ಟು, ದ್ವೀಪಾಂತರದ ಸೌದಾಗಾರರಿಂದ ಪದ್ಮರಾಗವೆಂಬ ಶ್ರೇಷ್ಠವಾದ ರತ್ನವನ್ನು ಕೊಂಡುಕೊಂಡನು. ಅದು ಉದಯಕಾಲದ ಬಾಲ ಸೂರ್ಯನ ಬಿಂಬದ ಹಾಗೆ ಪ್ರಕಾಶಿಸುತ್ತಿರುವದು. ಅದನ್ನು ತನ್ನ ಪ್ರಿಯಳಾದ ಹೆಂಡತಿಯ ಬಳಿಗೆ ಕಳುಹಿಸಿ ಕೊಟ್ಟರೆ ಅವಳು ನೋಡಿ ಸಂತೋಷಪಡುವದಲ್ಲದೆ ತನ್ನ ಸಾಮರ್ಥ್ಯಕ್ಕೂ ಸಂಪಾದ್ಯಕ್ಕೂ ಹಿಗ್ಗಿ ಮೆಚ್ಚಿ ಕೊಂಡಾಡುವಳೆಂದು, ಈ ಬಣಜಿಗನು ತನ್ನ ಹತ್ತರ ಇರುವ ಬ್ಯಾಡರ ಪ್ರೋಲೇರಿಗನೆಂಬ ಆಳಿನ ಕೈಗೆ ರತ್ನವನ್ನು ಕೊಟ್ಟು ಕಳುಹಿಸಿದನು. „ಬೇಡನ ಸಂಗ ಬೇಡ" ಎಂಬ ಸಾಮತಿಯಂತೆ ಆ ಪ್ರೋಲೇರಿಗನು ತನ್ನ ಊರಿಗೆ ಬಂದು ಶೆಟ್ಟಿಯ ಹೆಂಡತಿಗೆ ಕ್ಷೇಮ ಸಮಾಚಾರ ಮಾತ್ರ ಬಾಯಿ ಮಾತಿನಿಂದ ಹೇಳಿ, ಅವನ ಕಾಗದವನ್ನೂ ರತ್ನವನ್ನೂ ಸಹ ಕೊಡದೆ ಲಪಾಯಿಸಿ ಬಿಟ್ಟನು. ಆಳು ಹೇಳಿದ ಪ್ರಕಾರ ತಿಂಗಳೊಳಗಾಗಿ ಶೆಟ್ಟಿ ಬಾರದೆ ಸಾವಕಾಶವಾದ್ದರಿಂದ ಹೆಂಡತಿ ಗಂಡನಿಗೆ ಬರದ ಕಾಗ

ದವೇನಂದರೆ—ಎಲೈ ಅತ್ಯಂತ ಪ್ರಿಯನೇ, ನಿನ್ನನ್ನು ನಂಬಿ
ಕೈ ಹಿಡಿದವಳಾದ ನನ್ನ ಬಿನ್ನಹವನ್ನು ಮನಸ್ಸಿಗೆ ತಂದು
ಈ ಕಾಗದ ಕಂಡಕ್ಷಣವೇ ನೀನು ಜಾಗ್ರತೆಯಾಗಿ ಬಂದು
ಊರು ಸೇರ ಬೇಕು, ನನಗೆ ಊಟಕ್ಕೆ ತೋಟದ ಸೊಪ್ಪೇ
ಆಧಾರ, ಉಡುವದಕ್ಕಂತು ನೀನು ಕೊಟ್ಟ ಕೌದಿಯೇ, ನಾ
ನು ಹೊದ್ದಿದ್ದ ಹಚ್ಚಡ ಮುಪ್ಪಟೆ ಆಯಿತು, ಆ ಮುಪ್ಪಟೆ ಕೆಲವು
ದಿವಸದ ಮೇಲೆ ತುಂಡಾಗಿ „ತುಂಡೇ ಬಂಡವಾಳ" ಎಂಬ ಸಾ
ಮತಿಯು ಹಾಗೆ ಇದ್ದೆನು, ಈಗ ಆ ತುಂಡೂ ಇಲ್ಲದೆ ಬಲು
ಬಂಡಾಟವಾಗಿ ಕಷ್ಟಪಡುತ್ತಾ ಇದ್ದೇನೆ, ಕಾಸೇ ಕೈಲಾಸವಾ
ಗಿದೆ, ದುಡ್ಡು ದೊರಕುವದೇ ಇಲ್ಲ, ದುಡ್ಡಿಲ್ಲದ ಮೇಲೆ ದೊಡ್ಡ
ಸ್ತಿಕೆ ಹ್ಯಾಗೆ ಬಂದೀತು, „ದಡ್ಡನ ಕೈ ಹಿಡಿದವಳೇ ಹೆಡ್ಡಳು" ಎಂ
ಬ ಸಾಮತಿ ನನ್ನ ಪಾಲಿಗೆ ಬಂತು, ಇಂತೆ ಬಿನ್ನಹ. ಹೀಗೆ ಬರ
ದ ಕಾಗದವನ್ನು ಅವಲಕ್ಕಿ ಕುಟ್ಟಿ ಸಂಪಾದಿಸಿದ ಆರುಕಾಸು ಹಾ
ಸಲು ಕೊಟ್ಟು ಬೆಂಗಳೂರಿಂದ ಬಳ್ಳಾರಿಗೆ ಟಾಕೋಟಾಕು ತಲಪಿ
ಸ ಬೇಕೆಂದು ವಿಲಾಸ ಬರೆದು ಟಪಾಲು ಮೇಲೆ ಹಾಕಿ ಬಿಟ್ಟಳು.
ಆ ಕಾಗದ ಮೈಲಾರಿ ಶೆಟ್ಟಿಗೆ ತಲಪಿ, ನೋಡಿಕೊಂಡ ತಕ್ಷಣದಲ್ಲೇ
ಪ್ರೋಲೇರಿಗನು ಮೋಸಾ ಮಾಡಿದನೆಂದು ತಿಳಿದು, ತಾನಿದ್ದ ಕಡೆ
ಯಿಂದ ಪಿಕಾಪಿಕಿ ಹೊರಟು, ಬೀಳೋದು ಏಳೋದು ತಿಳಿಯದೆ
ಬಂದು ಊರು ಸೇರಿ, ಹೆಂಡತಿಯ ಅವಸ್ಥೆಯನ್ನು ನೋಡಿ ವ್ಯಸ
ನ ಪಟ್ಟು ವಸ್ತ್ರ ಭೋಜನಾದಿಗಳಿಂದ ಸಮಾಧಾನ ಪಡಿಸಿ, ತಾ
ನು ಕಳುಹಿಸಿದ ಪದ್ಮರಾಗ ರತ್ನವು ಪ್ರೋಲೇರಿಗನ ಪಾಲಾದ್ದ
ರಿಂದ ತನ್ನ ಆಸ್ತಿ ಎಲ್ಲಾ ಪ್ರೋಲಾಯಿತೆಂದು ಪ್ರೋಲೀಸು ಕಚೇ
ರಿಗೆ ಹೋಗಿ, ನ್ಯಾಯಾಧಿಪತಿಯ ಬಳಿಯಲ್ಲಿ ಗೋಳಾಡಿದನು.

ಆ ಫಿರ್ಯಾದನ್ನು ಕೇಳಿ ನ್ಯಾಯಾಧಿಕಾರಿ ತಕ್ಷಣದಲ್ಲೇ ಆ ಆಳ
ನ್ನು ಕರಸಿ ನಿಜವಾಗಿ ಹೇಳೆಂದು ವಿಚಾರಣೆ ಮಾಡಲು, ಪ್ರೋ
ಲೇರಿಗನು ನನ್ನ ಕೈಲಿ ಮೈಲಾರಿಶೆಟ್ಟಿ ಕೊಟ್ಟ ಮೇಲು ರತ್ನವ
ನ್ನು ಆತನ ಹೆಂಡತಿಯ ಕೈಲಿ ಇಬ್ಬರು ಸಾಕ್ಷಿಗಳ ಮುಂದೆ ಕೊ
ಟ್ಟಿದ್ದೇನೆಂದು ಹೇಳಿದನು. ಅದಕ್ಕೆ ನ್ಯಾಯಾಧಿಕಾರಿಯು, ಎ
ಲಾ ಕಳ್ಳ ಸೇವಕನೇ, ನಂಬಿಕೆಯಾಗಿ ನಿನ್ನ ಕೈಲಿ ರತ್ನವನ್ನು
ಕೊಟ್ಟು ತನ್ನ ಹೆಂಡತಿಗೆ ತಲಪಿಸೆಂದು ರಹಸ್ಯವಾಗಿ ಕಳುಹಿಸಿ
ಇರಲಾಗಿ, ಅದನ್ನು ನೀನು ನಿನ್ನ ಯಜಮಾನೀ ಕೈಲಿ ಹಾಗೆ
ಕೊಡದೆ, ಸಾಕ್ಷಿಗಳ ಮುಂದಿಟ್ಟುಕೊಂಡು ಕೊಡುವದಕ್ಕೆ ಕಾ
ರಣವೇನು ? ಇದಕ್ಕೆ ಬಳಗದೆ ಎಂದಾದರೂ ನಿನ್ನ ಎಜಮಾ
ನನಾದ ಈ ಶೆಟ್ಟಿಯು ನಿನ್ನ ಮೇಲೆ ಲಿಗಾಡ ಹಾಕಿ ತೆಗದುಕೊಂ
ಡನೋ ? ಅದಿಲ್ಲದ ಮೇಲೆ, ನಿನ್ನಲ್ಲಿ ನಿನ್ನ ಏಜಮಾನನಿಗೆ ನಂ
ಬಿಕೆ ಇದ್ದ ಹಾಗೆ ಅವನಲ್ಲಿ ನಿನಗೆ ನಂಬಿಕೆ ಇಲ್ಲದೆ ಸಾಕ್ಷಿಗಳ
ಮುಂದಿಟ್ಟುಕೋ ಬೇಕಾದ ಅಗತ್ಯವೇನು ? ಅದಾಗ್ಯೂ ಚಿಂತೆ
ಇಲ್ಲ, ನಿನ್ನ ಕೈಗೆ ಈ ಶೆಟ್ಟಿ ಕೊಟ್ಟ ರತ್ನವು ಎಷ್ಟು ಗಾತ್ರ
ಯಾವ ಬಣ್ಣವಾಗಿ ಇತ್ತೆಂದು ಕೇಳಲು, ಆಳು ಚಪ್ಪರ ದ್ರಾ
ಕ್ಷಿ ಹಂಣಿನ ಗಾತ್ರ ಕಳವಾಗಿದ ಶೀ ತೊಂಡೆ ಹಂಣಿನ ಹಾಗೆ
ಕೆಂಪಾಗಿತ್ತೆಂದನು. ನ್ಯಾಯಾಧಿಪತಿಯು ಆ ರತ್ನವು ತೊಂ
ಡೆ ಹಣ್ಣಿನ ಬಂಣವಾಗಿಯೂ ದ್ರಾಕ್ಷಿ ಹಣ್ಣಿನ ಗಾತ್ರವಾಗಿ
ಯೂ ಇತ್ತೆಂಬ ಮಾತನ್ನು ಮೂರು ಬಾರಿಗೂ ಸ್ಥಿರಪಡಿಸಿ,
ಮೈಲಾರ ಶೆಟ್ಟಿಯ ಕಡೆಗೆ ತಿರಿಗಿ ಇವನು ಹೇಳುವ ಮಾತು ನಿಜ
ವ್ರೋ ? ಎಂದು ಕೇಳಿದ್ದಕ್ಕೆ, ಶೆಟ್ಟಿ ಹಾದಯ್ಯಾ, ನಿಜವೇ ಸರಿ,
ಎಂದು ಹೇಳಿದನು. ಆ ಮಾತನ್ನು ಗ್ರಹಿಸಿ ನ್ಯಾಯಾಧಿಪತಿ

ಈ ಶೆಟ್ಟಿಯನ್ನೂ ಸೇವಕನನ್ನೂ ಬೇರೆ ಬೇರೆ ಕೊಟ್ಟಡಿಗಳಿಗೆ ಹೋಗಿರೆಂದಾಜ್ಞಾಪಿಸಿ, ಆ ಆಳು ಹೇಳಿದ ಸಾಕ್ಷಿಗಳನ್ನು ಕರಸಿ ಈ ಸಂಗತಿ ನಿಮಗೆ ತಿಳಿಯುವದೋ? ಎಂದು ಕೇಳಲು, ಅವರು ತಿಳಿಯುವದು, ಜಂಬು ನೇರಳೆ ಹಣ್ಣಿನ ಹಾಗೆ ಕಪ್ಪಾಗಿ ಗಾತ್ರವಾಗಿ ಇದ್ದ ಒಂದು ಕಲ್ಲನ್ನು ನಮಗೆ ತೋರಿಸಿ, ಇದ ಶೆಟ್ಟಿಯ ಹೆಂಡತಿಗೆ ಕೊಟ್ಟು ಬಿಟ್ಟು ಬರುತ್ತೇನೆಂದು ನಮ್ಮ ಸಂಗಡ ಹೇಳಿ ಹೋಗಿ, ಕೊಟ್ಟು ಬಂದೆನೆಂದು ಸಹ ಆ ಶೆಟ್ಟೇಮನೆಯ ತಲಬಾಗಲ ಜಗಲೀ ಮೇಲೆ ಕುಳಿತಿದ್ದ ನಮ್ಮ ಸಂಗಡ ಈ ಪ್ರೋಲೇರಿಗನು ಹೇಳಿದ್ದುಂಟೆಂದು ಸಾಕ್ಷಿ ನುಡಿದರು. ಆಗ ನ್ಯಾಯಾಧಿಪತಿಯು ಈ ಸೇವಕನನ್ನು ನೋಡಿ, ಎಲಾ ವಂಚಕನೇ, ಎಜಮಾನನು ಕೊಟ್ಟ ತೊಂಡೆ ಹಣ್ಣನ್ನು ಅಥವಾ ದ್ರಾಕ್ಷಿ ಹಣ್ಣನ್ನು ತಂದು ನಿನ್ನ ಎಜಮಾನಿಯ ಕೈಗೆ ಕೊಡ ಬೇಕಲ್ಲವೆ, ಆ ಹಣ್ಣ ನೀನೇ ತಿಂದು ನೇರಳೇ ಹಣ್ಣನ್ನು ಕೊಡ ಬಹುದೋ? ಇದು ನಿನಗೆ ಉಚಿತವೋ? ಹೀಗೆಯೇ ಕಾಸಿಗೆ ಕರವಲ್ಲದ ಕರೀಕಲ್ಲನ್ನು ಅರಿಯದ ಹೆಂಗಸಿನ ಕೈಲಿ ಕೊಟ್ಟದ್ದಾಗಿ ಸಾಕ್ಷಿ ನುಡಿಸಿ, ನಾಲ್ಕಾರು ಸಾವಿರ ರೂಪಾಯಿ ಬಾಳುವ ಪದ್ಮರಾಗ ಮಣಿಯನ್ನು ದಕ್ಕಿಸಿ ಕೊಳ್ಳುತ್ತೀಯಾ? ಕೊಡದು, ಬೇಗ ತಂದು ಕೊಡು ಎಂದು ಕಣ್ಣು ಕೆಂಪಗೆ ಮಾಡಿದನು. ಮಹಾ ಕೋಪರಸ ಉಳ್ಳ ನ್ಯಾಯಾಧಿಪತಿಯ ಮುಖವನ್ನು ನೋಡಿದ ಮಾತ್ರದಿಂದಲೇ, ಪ್ರೋಲೇರಿಗನಿಗೆ ಮೈ ಯೆಲ್ಲಾ ನಡುಗೆತ್ತಿ, ಅವನು ಸ್ವಾಮಿ, ಬುದ್ಧಿ, ಕಷ್ಟೆಸು, ಕ್ರಿಯಕ್ಕೆ ತಕ್ಕೊಳ್ಳುವ ರೊಬ್ಬರೂ ಇಲ್ಲ, ಈ ರತ್ನವು ನನಗೆ ದಕ್ಕಲಾರದೆಂದು ಒಮೊಳಿನ ಕೊ

ನೆಯಲ್ಲಿ ಕಟ್ಟಿ ತಲೆಯಲ್ಲಿ ಶಿಕ್ಕಿಸಿ ಕೊಂಡಿದ್ದ ಮಣಿಯನ್ನು ಧರ್ಮಾಸನದ ಮುಂದೆ ಇಟ್ಟನು. ಅದನ್ನು ಆ ಸೊಂತಗಾರನಿಗೆ ಕೊಡಿಸಿ ವಂಚಕನಿಗೆ ದಂಡನೆ ವಿಧಿಸಿ ಆ ದಿವಸದ ನ್ಯಾಯತೀರ್ಮಾನಕೆಯನ್ನು ದಿನ ವಹಿಗೆ ಬರಿಸಿ ನ್ಯಾಯಾಧಿಕಾರಿಯು ಕೋರ್ಟು ಬರಖಾಸ್ತೆಂದು ಹುಕುಂಮಾಡಿ ಎದ್ದು ಮನೆಗೆ ಹೋದನು. ಹೀಗೆ ಶ್ರೇಷ್ಠರಾದ ನ್ಯಾಯಾಧಿಪತಿಗಳು ನ್ಯಾಯಗಳನ್ನು ಚನ್ನಾಗಿ ವಿಚಾರಣೆ ಮಾಡುವರು.

---

## 50. THE HUNTSMAN AND THE MONKEY.

### ೫೦ ಬೇಡರವನೂ ಕಪಿಯೂ.

ಒಬ್ಬ ಬೇಟೆಗಾರನು ಅಡವಿಯಲ್ಲಿ ಮೃಗಗಳನ್ನು ಹೊಡೆಯುತ್ತಾ ಇರಲಾಗಿ, ತನ್ನನ್ನು ಮುಗಿಸಿಕೊಳ್ಳ ಬೇಕೆಂದು ಹದಿನಾರು ಹೆಜ್ಜೆಯ ಪಟಾವಳಿ ಹುಲಿ ಘುರಕಾಯಿಸಿ ಕೊಂಡು ಬರುವದನ್ನು ದೂರದಿಂದ ಕಂಡು, ಓ ಹೋ! ಮೋಸ ಬಂತೆಂದು ದೊಡ್ಡ ಮರದ ಮೇಲೆ ಹತ್ತಿ ಕೂತುಕೊಂಡನು. ಆಗ ಆ ಹುಲಿಯು ಆ ಮರದ ಬುಡದಲ್ಲಿ ಬಂದು ಕೂತು ಬಾಲವನ್ನು ನೆಲಕ್ಕೆ ಅಪ್ಪಳಿಸುತ್ತಾ ಆ ಮರದ ಮೇಲೆ ವಾಸವಾಗಿರುವ ಕೋತಿಯನ್ನು ನೋಡಿ, ಎಲೈ ಕೋತಿಯೇ, ನಿನಗೂ ನನಗೂ ಹಗೆಯುವನಾದ ಈ ಬೇಡನನ್ನು ನಂಬ ಬೇಡ, ಇವನನ್ನು ಕೆಳಕ್ಕೆ ದೊಬ್ಬಿ ಬಿಡೆಂದು ಹೇಳಲಾಗಿ, ಕೋತಿಯು ನನ್ನ ಮರೆ ಬಿದ್ದ ಮನುಷ್ಯನನ್ನು ನಿನ್ನ ಬಾಯಿಗೆ ದೊಬ್ಬ

ಲಾರೆನು, ಹೋಗೆಂದು ಹೇಳಿತು. ಅದನ್ನು ಹುಲಿ ಕೇಳಿ, ಅಲ್ಲೇ ಕೂತು ಕೊಂಡಿತು. ಕೋತಿಯು ಹಸಿದಿರುವ ಬೇಡನಿಗೆ ಹಣ್ಣಾದರು ತಂದು ಕೊಡ ಬೇಕೆಂದು ಎರಡನೇ ಮರಕ್ಕೆ ಹಾರಿ ಹೋಗಲು, ಹುಲಿಯು ಬೇಡನನ್ನು ನೋಡಿ ನೀನು ಆ ಕೋತಿಯ ಮರಿಯನ್ನು ಕೆಳಕ್ಕೆ ದೊಬ್ಬಿ ಬಿಡು, ನಿನ್ನ ಬಿಟ್ಟು ಅದನ್ನು ಎತ್ತಿ ಕೊಂಡು ಹೋಗುತ್ತೇನೆ, ಅಂದ ಮಾತ್ರದಲ್ಲೇ, ಬೇಡನು ಮರಿಯನ್ನು ದೊಬ್ಬಿ ಬಿಟ್ಟನು. ಸಂಗಡಲೇ ತಾಯಿ ಕೋತಿ ಬರಲು, ಹುಲಿಯು ಕೋತಿಯೇ, ನಿನ್ನಿಂದ ಉಪಕಾರವನ್ನು ಹೊಂದಿದ ಬೇಡನು ಮಾಡಿದ ಕೆಲಸವನ್ನು ನೋಡಿದಿಯಾ ? ಆದಾಗ್ಯೂ ನಿನ್ನ ಮರಿಯನ್ನು ನಾನು ಕೊಲ್ಲಲಾರೆ, ಬೇಡನ ನೇಸ್ತ ಬೆಂಕಿಯ ನೇಸ್ತ ಎರಡೂ ಒಂದೇ, ಬೇಡನು ಕೈಗೆ ಶಿಕ್ಕಿದ್ದನ್ನೆಲ್ಲಾ ಕೊಲ್ಲುವನು, ಬೆಂಕಿಯು ಉರಿಗೆ ಶಿಕ್ಕಿದನ್ನು ಸುಡುವದು, ಬೇಡನ ಸಂಗ ಬೇಡ ಎಂಬ ಸಾಮತಿಯನ್ನು ನೆನೆಸಿ ಕೊಂಡು, ಈಗಲಾದರೂ ಅವನ್ನ ಕೆಳಕ್ಕೆ ದೊಬ್ಬು, ಕೊಂದು ತಿಂದು ಹೋಗುತ್ತೇನೆ, ಎಂದು ಘರ್ಜಿಸಲು, ಕೋತಿಯು ಬೇಡನನ್ನು ನೋಡಿ, ನನ್ನ ಮರಿಯನ್ನು ಹುಲಿಯ ಬಾಯಿಗೆ ತಳ್ಳಿದಿಯಾ ? ಎಂದು ಕೇಳಿದ್ದಕ್ಕೆ, ನಾನು ತಳ್ಳಲಿಲ್ಲ, ಅದೇ ಬಿತ್ತೆಂದು ಬೊಂಕಿದನು. ಆ ಮಾತಿನ ಮೇಲೆ ಕೋತಿಯು ಹುಲಿಗೆ ಪ್ರತ್ಯುತ್ತರವಾಗಿ ನಾನು ಈ ಮನುಷ್ಯನನ್ನು ನಿನಗೆ ಕೊಡುವದಿಲ್ಲ, ನಿರಾಶೆ ಮಾಡಿ ಕೊಂಡು ಹೋಗೆನ್ನಲು, ಒಳ್ಳೇದೆಂದು ಹುಲಿಯು ಅಲ್ಲಿಂದ ಹೊರಟು, ಬೇಡನು ಬರುವ ದಾರಿಯ ಹೊದರಿನಲ್ಲಿ ಅಡಗಿ ಹೊಂಚಿ ಕೊಂಡಿತ್ತು. ಮರದ ಮೇಲಿರುವ ಕೋತಿಯು ಬೇಡನಿಗೆ ತಿನ್ನೆಂದು ಹಣ್ಣ

ನ್ನು ಕೊಟ್ಟು ಬದಿಕಿದ ಮರಿಯನ್ನು ತಬ್ಬಿಕೊಂಡು, ಒಂದು ಕೊಂಬಿನ ಮೇಲೆ ನಿದ್ದೆ ಹೋಗುವ ಹಾಗೆ ಕಣ್ಣು ಮುಚ್ಚಿಕೊಂಡು ಜಾಗ್ರತೆಯಾಗಿ ಇತ್ತು. ಆಗ ಬೇಡನು ಈ ಕೋತಿಯನ್ನಾದರೂ ಕೊಂದು ಮನೆಗೆ ತೆಕ್ಕೊಂಡು ಹೋಗ ಬೇಕೆಂದು ಕೈಲಿದ್ದ ದೊಣ್ಣೆಯನ್ನು ಮೇಲಕ್ಕೆ ಎತ್ತಿದನು. ಆ ಸೈಗೆಯನ್ನು ತಿಳಿದ ಕೋತಿಯು ಮರಿ ಸಹ ಎರಡನೇ ಮರಕ್ಕೆ ಚಂಗನೆ ಹಾರಿತು. ಈ ಪ್ರಕಾರ ಬೇಡನ ದೊಣ್ಣೆಯ ಪೆಟ್ಟನ್ನು ತಪ್ಪಿಸಿ ಕೊಂಡು, ಕೋತಿ, ಎಲಾ ಕಿರಾತಕನೇ, ಘಾತಕನೇ, ಉಪಕಾರಿಗೆ ಅಪಕಾರಿ ನೀನೇ ಸರಿ, ಮರವನ್ನು ಇಳಿದು ಬೇಗ ಓಡಿ ಹೋಗು, ಹೋಗದಿದ್ದರೆ ಕೋ! ಎಂದು ಕೂಗಿ, ಕೋಟಿ ಕೋತಿಗಳನ್ನು ಗುಂಪು ಕೂಡಿಸಿ, ನಿನ್ನ ಹೆಸರು ಅಣಗಿಸಿ ಬಿಡುತ್ತೇನೆ, ನೋಡಿಕೋ, ಎಂದು ಸ್ವಜಾತಿಯನ್ನು ಕರಿಯುವ ರೀತಿಯಿಂದ ಕೂಗಲು, ಸುತ್ತು ಮರಗಳಲ್ಲಿದ್ದ ಕೋತಿಗಳೆಲ್ಲಾ ಓಡಿ ಬರುವದನ್ನು ಕಂಡು, ಈ ಪಾಪಿಷ್ಠನಾದ ಬೇಡನು ತತ್ತರ ಪಟ್ಟು ಮರದಿಂದ ದುಮುಕಿ, ಊರಿಗೆ ಓಡಿ ಹೋಗುತ್ತಾ ಮಾರ್ಗದಲ್ಲಿ ಇದ್ದ ಅದೇ ಹುಲಿಯ ಬಾಯಿಗೆ ತುತ್ತಾದನು. ಆದಕಾರಣ ದುರ್ಮಾರ್ಗರಿಗೆ ಉಪಕಾರವನ್ನು ಮಾಡ ಬಾರದು, ಉಪಕಾರಿಗೆ ಅಪಕಾರವನ್ನು ಎಣಿಸುವವನಿಗೆ ಕೇಡು ತಪ್ಪದು.

## 51. THE BRAHMIN, TIGER, AND FOX.

### ೫೧. ಹುಲಿಯೂ ಬ್ರಾಹ್ಮಣನೂ ನರಿಯೂ.

ಒಂದು ಅಡವಿಯಲ್ಲಿ ಒಂದು ಹುಲಿಯು ಬೋನಿನಲ್ಲಿ ಶಿಕ್ಕಿ ಬಹಳವಾಗಿ ತೊಂದರೆ ಪಡುತ್ತಾ ಇತ್ತು. ಆಗ ಆ ಮಾರ್ಗದಲ್ಲಿ ಒಬ್ಬ ಬ್ರಾಹ್ಮಣನು ಬರುತ್ತಾ ಇದ್ದನು. ಅವನನ್ನು ನೋಡಿ ಹುಲಿಯು ಅಯ್ಯಾ ಬ್ರಾಹ್ಮಣೋತ್ತಮನೇ, ನಾನು ನಾಲ್ಕು ದಿವಸದಿಂದ ಈ ಬೋನಿನಲ್ಲಿ ಶಿಕ್ಕಿ ತಿಂಡಿ ಇಲ್ಲದೆ ಸಾಯುವ ಹಾಂಗೆ ಇದ್ದೇನೆ, ನನ್ನಲ್ಲಿ ದಯವಿಟ್ಟು ಬೋನಿನ ಬಾಗಲು ತೆರದು ರಕ್ಷಿಸಿದರೆ, ನಿನಗೆ ಬಹಳವಾಗಿ ಇಹದಲ್ಲಿ ಕೀರ್ತಿಯೂ ಪರದಲ್ಲಿ ಪುಣ್ಯವೂ ಉಂಟಾಗುತ್ತವೆ, ಸಕಲವಾದ ದಾನ ಧರ್ಮ ಪರೋಪಕಾರ ರೀತಿಗಳ ತಿಳಿದು ಇದ್ದೀ, ಪ್ರಾಣದಾನಕ್ಕಿಂತಲೂ ಶ್ರೇಷ್ಠವಾದ ದಾನ ವಿಲ್ಲವಷ್ಟೆ, ನನ್ನ ಶೆರೆಯನ್ನು ಬಿಡಿಸಿ ಪ್ರಾಣದಾನ ಮಾಡಿ ಹೆಚ್ಚಾದ ಮಾತಿನ ವಾಸಿಯನ್ನು ಪಡೆಯುವದು ನಿನಗೆ ಧರ್ಮವೆಂದು ಬಹುತರವಾಗಿ ಬೇಡಿ ಕೊಂಡಿತು. ಅದಕ್ಕೆ ಬ್ರಾಹ್ಮಣನು ಎಲೈ ವ್ಯಾಘ್ರವೇ, ನೀನು ಸ್ವಭಾವದಿಂದ ದುಷ್ಟ ಮೃಗವು, ಇದರ ಮೇಲೆ ನಾಲ್ಕು ದಿವಸದಿಂದ ಆಹಾರವಿಲ್ಲದೆ ಇದ್ದೀಯೆ, ನೀನು ಬಿದ್ದಿರುವ ಬೋನಿನ ಬಾಗಲನ್ನು ನಾನು ತೆರದ ಕ್ಷಣದಲೇ ನನ್ನನ್ನು ಕೊಂದು ತಿನ್ನುವಿ, ನಿನ್ನ ಸ್ವರೂಪವನ್ನು ನಾನು ಬಲ್ಲೆನು, ನಿನ್ನನ್ನು ಬೋನೊಳಗೆ ಕೆಡವಿದ ಬೇಟೆಗಾರನು ಈ ಹೊತ್ತೋ ನಾಳೆಯೋ ಬಂದು ನೆಲಬೋನಿನಿಂದ ಭಂಡೀ ಬೋನಿಗೆ ನಿನ್ನ ಅಟ್ಟಿ ಬಿಟ್ಟು, ಅದೇ ಭಂಡಿಯು

ಮೇಲೆ ಸಾಗಿಸಿಕೊಂಡು ಅರಸುಗಳ ಬಳಿಗೆ ಹೋಗಿ, ಬದುಕಿದ ಹುಲಿಯನ್ನು ಹಿಡುಕೊಂಡು ಬಂದೆನೆಂದು ಇನಾಮುಗಳು ಹೊಂದುವದಲ್ಲದೆ, ನೀನು ಅರಮನೇ ಬೋನಿನಲ್ಲಿ ಸೇರಿ ನಿತ್ಯವು ಒಂದೆರಡು ಕುರಿಗಳನ್ನು ತಿಂದು ಬದುಕುವಿ, ನಿನಗೆ ಅದೇ ಬಿಡುಗಡೆ ಅಲ್ಲದೆ ನಾನು ಬಿಡುವದಿಲ್ಲವೆಂದು ಒಡಂಬಡಿಸಿದನು. ಹುಲಿಯು ಅಯ್ಯಾ ಬ್ರಾಹ್ಮಣನೇ, ದುರಾಲೋಚನೆ ಮಾಡ ಬೇಡ, ನಿನ್ನನ್ನು ನಾನು ಕೊಲ್ಲುವದಿಲ್ಲ, ನಾನು ದುಷ್ಟ ಮೃಗವೇ ಸರಿ, ಆದರೂ ಉಪಕಾರಿಗೆ ಅಪಕಾರ ಮಾಡುವದಕ್ಕೆ ನಾನೇನು ಮಣ್ಣು ತಿನ್ನುತ್ತೇನೆಯೇ? ತಿನ್ನುವದೇ ಇಲ್ಲ, ಧರ್ಮದ ಮೇಲೆ ದೃಷ್ಟಿ ಇಟ್ಟು ನನ್ನ ಸೆರೆಯನ್ನು ಬಿಡಿಸಿ ಪ್ರಾಣದಾನ ಮಾಡು ಎಂದು ಪುನಃ ಬೇಡಿ ಕೊಂಡಿತು. ಅದನ್ನು ಕೇಳಿ ಬ್ರಾಹ್ಮಣನು "ವಿಷ ಪರೀಕ್ಷೆ ಮಾಡ ಬಾರದು" ಎಂಬದು ನಿಶ್ಚಯವೆಂದರಿಯದೆ, "ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡ ಬೇಕು" ಎಂಬ ಸಾಮಾನ್ಯ ವಾಕ್ಯವನ್ನು ಅಂಗೀಕರಿಸಿ, ಹುಲಿಯು ದುಷ್ಟ ಮೃಗವೆಂದು ತಿಳಿದಿದ್ದರೂ, ಇದರ ಮಾತಿನ ನೆಲೆಯನ್ನು ತಿಳಿಯ ಬೇಕೆಂಬ ಚಾಪಲದಿಂದ, ಆ ಹುಲಿಯ ಬೋನಿಗೆ ಬಿದ್ದಿರುವ ಬಾಗಿಲ ಹಲಿಗೆಯನ್ನು ಮೇಲಕ್ಕೆ ಎತ್ತಿದನು. ಕೂಡಲೇ ಆ ಹುಲಿಯು ಹುತ್ತಿನಿಂದ ಹೊರಟ ಘಟ ಸರ್ಪದ ಹಾಗೆ ಉರಿಯುವ ಕಣ್ಣುಗಳಿಂದಲೂ ಹಸಿವಿನಿಂದ ಹುಟ್ಟಿದ ಕೋಪದಿಂದಲೂ ಬೋನಿನಿಂದೀಚೆಗೆ ಬಂದು, ತಾನು ಹೊರಟ ಉರುಬಿಗೆ ಭಯಪಟ್ಟು ಕಾಲ್ಕಿಟ್ಟು ತೊಂದರೆಗೊಂಡು ತಪ್ಪು ಹೆಜ್ಜೆಗಳು ಹಾಕುತ್ತಾ ಓಡುತ್ತಿರುವ ಬ್ರಾಹ್ಮಣನನ್ನು ನಿಲ್ಲು ನಿಲ್ಲು ಎಂದು ಗದ್ದಿಸಿ ನಿಲ್ಲಿಸಿ, ಹಾರಿ ಬಂದು ಭುಜವನ್ನು ಹಿಡುಕೊಂಡಿ

## 51. THE BRAHMIN, TIGER, AND FOX.

### ೫೧. ಹುಲಿಯೂ ಬ್ರಾಹ್ಮಣನೂ ನರಿಯೂ.

ಒಂದು ಅಡವಿಯಲ್ಲಿ ಒಂದು ಹುಲಿಯು ಬೋನಿನಲ್ಲಿ ಶಿಕ್ಕಿ ಬಹಳವಾಗಿ ತೊಂದರೆ ಪಡುತ್ತಾ ಇತ್ತು. ಆಗ ಆ ಮಾರ್ಗದಲ್ಲಿ ಒಬ್ಬ ಬ್ರಾಹ್ಮಣನು ಬರುತ್ತಾ ಇದ್ದನು. ಅವನನ್ನು ನೋಡಿ ಹುಲಿಯು ಅಯ್ಯಾ ಬ್ರಾಹ್ಮಣೋತ್ತಮನೇ, ನಾನು ನಾಲ್ಕು ದಿವಸದಿಂದ ಈ ಬೋನಿನಲ್ಲಿ ಶಿಕ್ಕಿ ತಿಂಡಿ ಇಲ್ಲದೆ ಸಾಯುವ ಹಾಂಗೆ ಇದ್ದೇನೆ, ನನ್ನಲ್ಲಿ ದಯವಿಟ್ಟು ಬೋನಿನ ಬಾಗಲು ತೆರದು ರಕ್ಷಿಸಿದರೆ, ನಿನಗೆ ಬಹಳವಾಗಿ ಇಹದಲ್ಲಿ ಕೀರ್ತಿಯೂ ಪರದಲ್ಲಿ ಪುಣ್ಯವೂ ಉಂಟಾಗುತ್ತವೆ, ಸಕಲವಾದ ದಾನ ಧರ್ಮ ಪರೋಪಕಾರ ರೀತಿಗಳ ತಿಳಿದು ಇದ್ದೀ, ಪ್ರಾಣದಾನಕ್ಕಿಂತಲೂ ಶ್ರೇಷ್ಠವಾದ ದಾನ ವಿಲ್ಲವಷ್ಟೆ, ನನ್ನ ಶೆರೆಯನ್ನು ಬಿಡಿಸಿ ಪ್ರಾಣದಾನ ಮಾಡಿ ಹೆಚ್ಚಾದ ಮಾತಿನ ವಾಸಿಯನ್ನು ಪಡೆಯುವದು ನಿನಗೆ ಧರ್ಮವೆಂದು ಬಹುತರವಾಗಿ ಬೇಡಿ ಕೊಂಡಿತು. ಅದಕ್ಕೆ ಬ್ರಾಹ್ಮಣನು ಎಲೈ ವ್ಯಾಘ್ರವೇ, ನೀನು ಸ್ವಭಾವದಿಂದ ದುಷ್ಟ ಮೃಗವು, ಇದರ ಮೇಲೆ ನಾಲ್ಕು ದಿವಸದಿಂದ ಆಹಾರ ವಿಲ್ಲದೆ ಇದ್ದೀಯೆ, ನೀನು ಬಿದ್ದಿರುವ ಬೋನಿನ ಬಾಗಲನ್ನು ನಾನು ತೆರದ ಕ್ಷಣದಲೇ ನನ್ನನ್ನು ಕೊಂದು ತಿನ್ನುವಿ, ನಿನ್ನ ಸ್ವರೂಪವನ್ನು ನಾನು ಬಲ್ಲೆನು, ನಿನ್ನನ್ನು ಬೋನೊಳಗೆ ಕೆಡವಿದ ಬೇಟೆಗಾರನು ಈ ಹೊತ್ತೋ ನಾಳೆಯೋ ಬಂದು ನೆಲಬೋನಿನಿಂದ ಭಂಡೀ ಬೋನಿಗೆ ನಿನ್ನ ಅಟ್ಟಿ ಬಿಟ್ಟು, ಅದೇ ಭಂಡಿಯ

ಮೇಲೆ ಸಾಗಿಸಿಕೊಂಡು ಅರಸುಗಳ ಬಳಿಗೆ ಹೋಗಿ, ಬದುಕಿದ ಹುಲಿಯನ್ನು ಹಿಡುಕೊಂಡು ಬಂದೆನೆಂದು ಇನಾಮುಗಳು ಹೊಂದುವದಲ್ಲದೆ, ನೀನು ಅರಮನೇ ಬೋನಿನಲ್ಲಿ ಸೇರಿ ನಿತ್ಯವು ಒಂದೆರಡು ಕುರಿಗಳನ್ನು ತಿಂದು ಬದುಕುವಿ, ನಿನಗೆ ಅದೇ ಬಿಡುಗಡೆ ಅಲ್ಲದೆ ನಾನು ಬಿಡುವದಿಲ್ಲವೆಂದು ಒಡಂಬಡಿಸಿದನು. ಹುಲಿಯು ಅಯ್ಯಾ ಬ್ರಾಹ್ಮಣನೇ, ದುರಾಲೋಚನೆ ಮಾಡ ಬೇಡ, ನಿನ್ನನ್ನು ನಾನು ಕೊಲ್ಲುವದಿಲ್ಲ, ನಾನು ದುಷ್ಟ ಮೃಗವೇ ಸರಿ, ಆದರೂ ಉಪಕಾರಿಗೆ ಅಪಕಾರ ಮಾಡುವದಕ್ಕೆ ನಾನೇನು ಮಣ್ಣು ತಿನ್ನುತ್ತೇನೆಯೇ? ತಿನ್ನುವದೇ ಇಲ್ಲ, ಧರ್ಮದ ಮೇಲೆ ದೃಷ್ಟಿ ಇಟ್ಟು ನನ್ನ ಸೆರೆಯನ್ನು ಬಿಡಿಸಿ ಪ್ರಾಣದಾನ ಮಾಡು ಎಂದು ಪುನಃ ಬೇಡಿ ಕೊಂಡಿತು. ಅದನ್ನು ಕೇಳಿ ಬ್ರಾಹ್ಮಣನು "ವಿಷ ಪರೀಕ್ಷೆ ಮಾಡ ಬಾರದು" ಎಂಬದು ನಿಶ್ಚಯವೆಂದರಿಯದೆ, "ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡ ಬೇಕು" ಎಂಬ ಸಾಮಾನ್ಯ ವಾಕ್ಯವನ್ನು ಅಂಗೀಕರಿಸಿ, ಹುಲಿಯು ದುಷ್ಟ ಮೃಗವೆಂದು ತಿಳಿದಿದ್ದರೂ, ಇದರ ಮಾತಿನ ನೆಲೆಯನ್ನು ತಿಳಿಯ ಬೇಕೆಂಬ ಚಾಪಲದಿಂದ, ಆ ಹುಲಿಯ ಬೋನಿಗೆ ಬಿದ್ದಿರುವ ಬಾಗಿಲ ಹಲಿಗೆಯನ್ನು ಮೇಲಕ್ಕೆ ಎತ್ತಿದನು. ಕೂಡಲೇ ಆ ಹುಲಿಯು ಹುತ್ತಿನಿಂದ ಹೊರಟ ಘಟಸರ್ಪದ ಹಾಗೆ ಉರಿಯುವ ಕಣ್ಣುಗಳಿಂದಲೂ ಹಸಿವಿನಿಂದ ಹುಟ್ಟಿದ ಕೋಪದಿಂದಲೂ ಬೋನಿನಿಂದೀಚೆಗೆ ಬಂದು, ತಾನು ಹೊರಟ ಉರುಬಿಗೆ ಭಯಪಟ್ಟು ಕಾಲ್ಗೆಟ್ಟು ತೊಂದರೆಗೊಂಡು ತಪ್ಪು ಹೆಜ್ಜೆಗಳು ಹಾಕುತ್ತಾ ಓಡುತ್ತಿರುವ ಬ್ರಾಹ್ಮಣನನ್ನು ನಿಲ್ಲು ನಿಲ್ಲು ಎಂದು ಗದ್ದಿಸಿ ನಿಲ್ಲಿಸಿ, ಹಾರಿ ಬಂದು ಭುಜವನ್ನು ಹಿಡುಕೊಂಡಿ

ತು. ಆಗ ಆ ಬ್ರಾಹ್ಮಣನು ಹುಲಿಯನ್ನು ನೋಡಿ, ಎಲೈ ವ್ಯಾಘ್ರವೇ, ಧರ್ಮಕ್ಕೆ ಕಟ್ಟುಬಿದ್ದು ನಿನ್ನನ್ನು ಬೋನಿನಿಂದ ಬಿಡಿಸಿದೆನಲ್ಲಾ, ನೀನು ಆ ಉಪಕಾರವನ್ನು ನೆನಸದೆ ಅಧರ್ಮಕ್ಕೆ ಬಿದ್ದು ನನ್ನನ್ನು ಕೊಲ್ಲುವದು ನ್ಯಾಯವ್ರೋ ? ಅಲ್ಲವೆಂದನು. ಅದಕ್ಕೆ ಆ ಹುಲಿಯು ಹುಲಿಯಾದ ನಾನು ಮನುಷ್ಯನಾದ ನಿನ್ನನ್ನು ಕೊಂದು ತಿನ್ನುವದು ನ್ಯಾಯವೇ ಹೊರ್ತು ಅನ್ಯಾಯವಲ್ಲ, ಆದರೆ ನಾನು ನಿನ್ನನ್ನು ಬೇಡಿಕೊಂಡ ಎರಡು ಮಾತುಗಳಲ್ಲಿ ನನ್ನ ಸೆರೆಯನ್ನು ಬಿಡಿಸುವದು ಮೊದಲನೇ ಮಾತು, ಪ್ರಾಣದಾನ ಮಾಡುವದು ಎರಡನೇ ಮಾತು, ಇವುಗಳಲ್ಲಿ ನನ್ನ ಸೆರೆಯನ್ನು ಮಾತ್ರ ಬಿಡಿಸಿ, ಪ್ರಾಣದಾನ ಮಾಡದೆ ಓಡಿ ಹೋಗುವದು ನಿನಗೆ ನ್ಯಾಯವ್ರೋ ? ಆದ್ದರಿಂದ ನಿನ್ನ ಮಾತು ಸುಳ್ಳಾಗಬಾರದೆಂದು ನಿನ್ನ ಪ್ರಾಣವನ್ನು ದಾನವಾಗಿ ತೆಗದುಕೊಂಡು, ನಿನ್ನ ಶರೀರವನ್ನು ಭಕ್ಷಿಸುವದಕ್ಕೆ ಸಿದ್ಧವಾಗಿದ್ದೇನೆ, ಇದೇ ನೀನು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ, ಎಂದು ಹೇಳಲು, ಬ್ರಾಹ್ಮಣನು ಆಶ್ಚರ್ಯಪಟ್ಟು ದಿಗಲುಬಿದ್ದು ಕಡೆಗೆ ಧೈರ್ಯ ಹೊಂದಿ, ಎಲೇ ಹುಲಿಯೇ, ನಿನ್ನ ನನ್ನ ನ್ಯಾಯಾನ್ಯಾಯಗಳು ಎರಡನೇಯವರಿಂದ ತೀರ್ಮಾಗುವವರಿಗೂ ನನ್ನ ಕೊಲ್ಲದೆ ಇರುವಿಯಾ ? ಎಂದು ಕೇಳಿದನು. ಆ ಮಾತಿಗೆ ಹುಲಿ ಒಡಂಬಡಲು, ಹುಲಿಯನ್ನು ಕರಕೊಂಡು, ಬ್ರಾಹ್ಮಣನು ಹೋಗುತ್ತಿರುವಾಗ, ಒಂದು ನರಿಯು ಉದ್ದನಾದ ಕೋಡುಗಲ್ಲಿನ ಮೇಲೆ ಕೂತಿದ್ದು, ಇವರ ವಾಗ್ಯುದ್ಧವನ್ನು ಕೇಳಿ ಮಂದಟ್ಟು ಮಾಡಿಕೊಂಡು, ಬ್ರಾಹ್ಮಣನ ಆಪತ್ತನ್ನೂ ಹುಲಿಯ ಸಂಪತ್ತನ್ನೂ ಪರಿಹರಿಸಬೇಕೆಂದು ಆಲೋಚಿಸಿ, ಓ ವ್ಯಾಜ್ಯಗಾರರೇ, ನಿಮ್ಮ ವ್ಯಾಜ್ಯದ ಸಂಗತಿ

ನನಗೆ ಮಂದಟ್ಟು ಆಗಿ ಆಗದೆ ಇರುವದರಿಂದ ತೀರ್ಪು ಮಾ ಡಲಿಕ್ಕಿಲ್ಲದೆ ಇದೆ, ಆದ್ದರಿಂದ ಓ ಹುಲಿಯೇ, ನೀನು ಆ ಬೋ ನಿನಲ್ಲಿ ಇದ್ದದ್ದು ಹ್ಯಾಗೆ? ಈ ಬ್ರಾಹ್ಮಣನು ನಿನ್ನನ್ನು ಬಿಡಿಸಿ ದ್ದು ಹ್ಯಾಗೆ? ಈ ಎರಡು ಮಾತನ್ನು ಪ್ರತ್ಯಕ್ಷವಾಗಿ ನನಗೆ ತೋರಿಸಿದರೆ, ಈ ವ್ಯಾಜ್ಯವನ್ನು ತೀರಿಸುತ್ತೇನೆಂದು ಹೇಳಿತು. ಆ ಮಾತಿಗೆ ಹುಲಿ ಭ್ರಮಿಸಿ ಬೋನಿನಲ್ಲಿ ನಾನು ಹೀಗೆ ಬಿದ್ದು ಇದ್ದೆನೆಂದು ಮುಂಚಿನಂತೆ ಬೋನಿನೊಳಗೆ ತೂರಿಕೊಂಡಿತು. ಆಗ ಬ್ರಾಹ್ಮಣನ ಕೈಯಿಂದ ಬೋನಿನ ಬಾಗಲನ್ನು ಯಥಾಪ್ರ ಕಾರ ಭದ್ರಪಡಿಸಿ, ನರಿಯು ಬೋನಿನ ಹತ್ತಿರಕ್ಕೆ ಬಂದು, ಹುಲಿ ಯನ್ನು ಕುರಿತು ನೀನಂತೂ ಬೋನಿನಲ್ಲಿ ಹೀಗೆ ಇದ್ದೀಯಲ್ಲ, ಬ್ರಾಹ್ಮಣನು ಯಾವ ದಾರಿಯಲ್ಲಿ ಹೋಗುತ್ತಾ ಇದ್ದನು, ಹೇ ಳೆಂದು ಕೇಳಿದ್ದಕ್ಕೆ ಅದೇ ದಾರೀಲಿ ಹೋಗುತ್ತಾ ಇದ್ದನೆಂದು ಹುಲಿ ಹೇಳಿತು. ನರಿಯು ಸರಿ ಸರಿ, ವಾಜ್ಯ ತೀರಿತು, ನೀನು ಹೀಗೇ ಇರು, ಅವನು ಹಾಗೇ ಹೋಗಲಿ, ಎಂದು ಕೂಗಿ ಬ್ರಾಹ್ಮಣನನ್ನು ಓಡಿಸಿ ಬಿಟ್ಟಿತು. ಹೀಗೆ ದುಷ್ಟರಿಗೆ ಉಪಕಾ ರಾ ಮಾಡಿದರೆ ಅಪಾಯ ಸಂಭವಿಸುವದು, ಆ ಅಪಾಯವನ್ನು ಉಪಾಯದಿಂದ ಪರಿಹರಿಸಿ ಕೊಳ್ಳ ಬೇಕು.

---

## 52. THE SWAN AND THE CRANE.

### ೫೨. ಹಂಸವೂ ಬಕವೂ.

ಒಂದು ಕೆರೇ ಕಟ್ಟೆಯ ಮೇಲೆ ಒಂದು ಕೊಕ್ಕರೆ ಕೂತುಕೊಂಡಿತ್ತು. ಆಗ ಶರತ್ಕಾಲವಾದ್ದರಿಂದ ಹಂಸ ಪಕ್ಷಿಗಳ ಸಂಚಾರ ಬಹಳವಾಗಿತ್ತು. ಅವುಗಳಲ್ಲಿ ಒಂದು ಹಂಸವು ಆ ಕೆರೆಗೆ ಆಹಾರಾರ್ಥವಾಗಿ ಬಂದ ವೇಳೆಯಲ್ಲಿ ಬಕವು ಅದನ್ನು ನೋಡಿ ಎಲೈ ಪಕ್ಷಿಯೇ, ನೀನ್ಯಾರು ? ಎಲ್ಲಿಂದ ಬಂದಿ? ನಿನ್ನ ಬಣ್ಣವೂ ನನ್ನ ಬಣ್ಣವೂ ಮಾತ್ರ ಒಂದಾಗಿರುವದು, ಆದರೆ ಜಾತಿ ಒಂದೇ ಅಲ್ಲ, ನಿನ್ನ ಕಾಲುಗಳೂ ಮೂಗೂ ಕೆಂಪಾಗಿವೆ, ನೀನು ನಮ್ಮ ಹಾಗೆ ನಡಿಯ ಬೇಕೆಂದು ಆಲೋಚಿಸುತ್ತೀ, ಈ ಜನ್ಮದಲ್ಲಿ ಕಲಿಯಲಾರಿ, ಅದು ಹಾಗಿರಲಿ, ನಿನ್ನ ವರ್ತಮಾನವನ್ನು ಹೇಳು, ಎಂದು ಗರ್ವದಿಂದ ಮಾತನಾಡಿತು. ಹಂಸವು ಬಕಪಕ್ಷಿಯನ್ನು ನೋಡಿ, ಎಲೈ ಜಲಚರವೇ ? ನನ್ನನ್ನು ಪಕ್ಷಿ ಎಂದು ನೀನು ಕರದಿ, ನೀನು ಪಕ್ಷಿಯೋ ? ಎನಲು, ಬಕಕ್ಕೆ ಕೋಪ ಹುಟ್ಟಿ ಅದು ಹಂಸವನ್ನು ನೋಡಿ, ನಾನು ನೀರಿನಲ್ಲಿ ಸಂಚಾರ ಮಾಡುವದರಿಂದ ಜಲಚರವೇ ಸರಿ, ನೀನು ನೀರಿಗೆ ಬಂದಿದ್ದೀಯಲ್ಲಾ, ನಿನ್ನನ್ನು ಜಲಚರವೆಂದು ಕರಿಯುವದಕ್ಕೆ ಏನು ಅಡ್ಡಿ ? ನಿನಗೆ ಮಾತ್ರ ಖೇಚರತ್ವ ಉಂಟೆಂದೂ ನನಗೆ ಮಾತ್ರ ಇಲ್ಲವೆಂದೂ ನೆನಸಿದಿಯೋ ? ಚಿಂತೆ ಇಲ್ಲ, ನೀನು ಎಲ್ಲಿಂದ ಬಂದಿ ? ನಿನ್ನ ಹೆಸರು ಏನು ? ಎಂದು ಪುನಃ ಕೇಳಿತು. ಹಂಸವು ಎಲೈ ಪಕ್ಷಿಯೇ, ಕೋಪಿಸಿ ಕೊಳ್ಳ ಬೇಡ, ಬಕ ಪಕ್ಷಿಯಾದ ನಿನ್ನ ವೃತ್ತಾಂತವನ್ನು ನಾನು ಬಲ್ಲೆನು, ನಾನು ಹಂಸ

ಪಕ್ಷಿಯು, ನನ್ನ ವಾಸಸ್ಥಾನವು ಮಹೋನ್ನತವಾದ ಸತ್ಯಲೋಕ ದಲ್ಲಿ ಸೂರ್ಯ ಚಂದ್ರಕಾಂತ ಶಿಲೆಗಳಿಂದ ಅಲಂಕರಿಸಲ್ಪಟ್ಟು ರತ್ನ ಮಯವಾಗಿ ಹಾಲಿನಂಥಾ ನೀರುಳ್ಳ ಮಾನಸ ಸರೋವರವು ಸಂಚಾರಕ್ಕಾಗಿ ಭೂಲೋಕಕ್ಕೆ ಬಂದು ಇದ್ದೇನೆ, ಈ ಕೆರೇ ಬಳಿಲಿ ಕೂತಿರುವ ನಿನ್ನನ್ನು ಕಂಡೆನು, ಸಂತೋಷವಾಯಿತು, ಪಕ್ಷಿಯಾದ ನಿನಗೆ ಲೋಕಾಂತರ ಸಂಚಾರ ಮಾಡುವ ಬೇಚ ರತ್ವ ಉಂಟಾಗಿರ ಬಹುದು, ಸತ್ಯಲೋಕವನ್ನು ನೋಡ ಬೇ ಕೆಂಬ ಆಶೆ ಇದ್ದರೆ ನನ್ನ ಸಂಗಡ ಬಾ, ಕರಕೊಂಡು ಹೋ ಗುತ್ತೇನೆ, ಎಂದು ಹೇಳಿತು. ಬಕ ಪಕ್ಷಿಯು ನೀನು ಹಂಸ ವ್ರೋ? ಸತ್ಯಲೋಕವಲ್ಲಿರುವ ಮಾನಸ ಸರೋವರದಲ್ಲಿ ವಾಸ ವಾಗಿದ್ದೀಯೋ? ಲಕ್ಷಾಂತರ ಯೋಜನಗಳ ಉನ್ನತವನ್ನು ದಾ ಟಿ ಕಷ್ಟಪಟ್ಟು ನಿನ್ನ ವಾಸಸ್ಥಳಕ್ಕೆ ಬಂದರೆ, ಆ ಸರೋವರವು ವಜ್ರ ವೈಡೂರ್ಯ ಗೋಮೇಧಿಕ ಪುಷ್ಯರಾಗ ಪಚ್ಚೆ ಪದ್ಮ ರಾಗ ನೀಲ ಈ ರತ್ನಗಳ ಶಿಲೆಗಳಿಂದ ಕಟ್ಟಲ್ಪಟ್ಟ ಸೋಪಾನ ಗಳುಳ್ಳದ್ದಾಗಿ, ಮುತ್ತು ಹವಳಗಳಿಗೆ ಬದಲಾಗಿ ಸೂರ್ಯಕಾಂ ಚಂದ್ರಕಾಂತ ಶಿಲೆಗಳಿಂದ ಅಲಂಕರಿಸಲ್ಪಟ್ಟಿರುವದನ್ನು ನೋಡಿ ಸಂತೋಷಿಸ ಬಹುದೆಂದು ಹೇಳುತ್ತೀ, ಇಂಥಾ ರತ್ನಗಳು ಸರ್ವ ಸಾಧಾರಣವಾಗಿ ಭೂಲೋಕದಲ್ಲಿ ಇರುತ್ತವೆ. ಆ ಸರೋವರದ ನೀರು ನೀನು ಹೇಳುವಂತೆ ಹಾಲಿನ ಹಾಗೆ ಇದ್ದ ರೆ, ಅದರಲ್ಲಿ ಸ್ನಾನ ಪಾನಗಳು ಮಾಡಿದವರಿಗೆ ಮೈ ಎಲ್ಲಾ ಜಿ ಡ್ಡು ಜಿಡ್ಡಾಗುವದಲ್ಲದೆ, ಹೊಟ್ಟೆಯಲ್ಲಿ ಮಂದಾಗ್ನಿಯೂ ಉಂಟಾ ಗುತ್ತದೆ, ಭಂಗಾರದ ಕಮಲಗಳ ನಾಳಗಳನ್ನು ತಿನ್ನುವದು ಹ್ಯಾಗೆ! ಅದಕ್ಕೆ ಬದಲಾಗಿ ಕಲ್ಲುಗಳನ್ನೂ ಮಣ್ಣನ್ನೂ ಯಾ

ತಕ್ಕೆ ತಿನ್ನ ಬಾರದು? ಹಾಗೆಯೇ ಭಂಗಾರವು ನೋಟಕ್ಕೆ ಮಾತ್ರ ಅಲ್ಲದೆ ಊಟಕ್ಕೆ ತಕ್ಕದ್ದಲ್ಲ, ಇದೆಲ್ಲಾ ಹ್ಯಾಗಾದರೂ ಇರಲಿ, ಆ ಮಾನಸ ಸರೋವರದಲ್ಲಿ ಸಣ್ಣ ಸಣ್ಣ ಕಪ್ಪೆಗಳು ಏಡಿಗಳು ಮೀನುಗಳು ಉಂಟೋ? ಹೇಳೆಂದು ಕೇಳಿತು. ಅದಕ್ಕೆ ಹಂಸವು ಎಲೈ ಬಕವೇ, ದೇವತಾ ಯೋಗ್ಯವಾದ ವಸ್ತುಗಳೆಲ್ಲಾ ಇರುವ ನಮ್ಮ ಮಾನಸ ಸರೋವರದಲ್ಲಿ ಈ ಏಡಿಗಳೂ ಕಪ್ಪೆಗಳೂ ಇಲ್ಲವೆಂದು ಹೇಳಿತು. ಆ ಮಾತಿಗೆ ಬಕವು ಅವು ಇಲ್ಲದಿದ್ದರೆ ಅಂಥಾ ನಿಷ್ಪ್ರಯೋಜನವಾದ ಲೋಕದಿಂದ ನಮಗೆ ಆಗತಕ್ಕ ಕೆಲಸವೇನೂ ಇಲ್ಲವೆಂದು ಹೇಳಲು, ರಾಜ ಹಂಸವು ನಗುತ್ತಾ ಸ್ವೇಚ್ಛೆಯಾಗಿ ಹಾರಿ ಹೋಯಿತು. ಈ ಪ್ರಕಾರ ಹೀನರು ಒಳ್ಳೇ ವಸ್ತುಗಳಲ್ಲಿ ದೋಷವನ್ನೂ ನೀಚ ವಸ್ತುಗಳಲ್ಲಿ ಗುಣವನ್ನೂ ಎಣಿಸುವರು.

---

## 53. THE TWO BOYS AND THEIR EAR-RINGS.

### ೫೩. ಇಬ್ಬರು ಹುಡುಗರೂ ಅವರ ಕರ್ಣಾಭರಣಗಳೂ.

ಒಂದು ಊರಿನವರಾದ ಇಬ್ಬರು ಹುಡುಗರು ಜೊತೆಯಾಗಿ ಬೇರೆ ದೇಶಕ್ಕೆ ಹೋಗಿ ಬರೋಣ ಎಂದು ಹೊರಟರು. ಅವರಲ್ಲಿ ಒಬ್ಬನ ಕಿವಿಯಲ್ಲಿ ಒಂಟಿ ಇತ್ತು, ಮತ್ತೊಬ್ಬನ ಕಿವಿಯಲ್ಲಿ ಸಣ್ಣ ಹಿತ್ತಾಳೆ ಕಡುಕು ಇತ್ತು. ಅವರಿಬ್ಬರೂ ನಾಲ್ಕಾರು ಗಾವದ ಹೋದ ತರುವಾಯ ಹಿತ್ತಾಳೆ ಕಡುಕಿನವನು ಈ ಒಂಟಿಯವನನ್ನು ನೋಡಿ, ಎಲಾ ಅಣ್ಣಾ, ನನಗೆ ಆಶೆಯಾಗುತ್ತದೆ, ನನ್ನ ಹಿತ್ತಾಳೆ ಕಡುಕನ್ನು ನೀನು ತೆಕ್ಕೊಂಡು ನಿನ್ನ ಒಂಟಿಯನ್ನು ನನಗೆ ಕೊ

ಡು, ಎಂಟು ದಿವಸದ ಮೇಲೆ ತಿರಿಗಿ ನಿನಗೆ ಕೊಡುತ್ತೇನೆ, ಎಂದನು. ಅದಕ್ಕೆ ಬಂಟಿಯುವನು ಒಡಂಬಟ್ಟು, ಬಂಟಿಯನ್ನು ಕೊಟ್ಟು ಪತ್ರ ಕಡುಕನ್ನು ತೆಕ್ಕೊಂಡನು. ಈ ಮೇರಿಗೆ ಬದಲಾಯಿಸಿ ಕೊಂಡು ಪದಿನೈದು ದಿವಸವಾದ ಮೇಲೆ ನನ್ನದು ನನಗೆ ಕೊಟ್ಟು ನಿನ್ನದು ನೀನು ತೆಕ್ಕೊಳ್ಳೆಂದು ಬಂಟಿಯುವನು ಕೇಳಲಾಗಿ, ಪತ್ರಕಡುಕಿನ ಹುಡುಗನು ತನ್ನ ಒಂದು ವರಹಾದ ಕ್ರಯವುಳ್ಳ ಪತ್ರಕಡುಕಿಗೆ ಬದಲಾಗಿ ಹತ್ತು ವರಹಾ ಬಾಳುವ ಬಂಟಿಯನ್ನು ಅಪಹರಿಸ ಬೇಕೆಂಬ ದುರಾಶೆಯಿಂದ, ಆ ಜೊತೆಗಾರನಿಗೆ ನಿನ್ನದು ನಿನ್ನ ಕಿವಿಯಲ್ಲೇ ಇದೆ, ನನ್ನದು ನನ್ನ ಕಿವಿಯಲ್ಲೇ ಇದೆ, ಹೀಗಿರುವಲ್ಲಿ ಕೊಡುವದೇನು ತೆಕ್ಕೊಳ್ಳುವದೇನು ? ಹೋಗೆಂದು ಉಡಾಯಿಸಿದನು. ಹೀಗೆ ಬಂಟಿ ನನ್ನದು ತನ್ನದು ಎಂತ ಇಬ್ಬರಿಗೂ ಬಹಳ ವ್ಯಾಜ್ಯ ಉಂಟಾಯಿತು, ಈ ವ್ಯಾಜ್ಯವನ್ನು ಹರಿಸುವ ಮಧ್ಯಸ್ಥಗಾರರು ಒಬ್ಬರೂ ಇಲ್ಲದ್ದರಿಂದ, ಈ ಹುಡುಗರು ನ್ಯಾಯಾಧಿಪತಿಯ ಬಳಿಗೆ ಹೋಗಿ, ತಮ್ಮ ತಮ್ಮ ವಾಂಗ್ಮೂಲಗಳನ್ನು ಹೇಳಿ ಕೊಂಡರು. ಆಗ ಆ ಅಧಿಕಾರಿಯು ಈ ಇಬ್ಬರ ಮುಖ ಭಾವವನ್ನು ನೋಡಿ, ಒಡವೆ ಕಳಕೊಂಡವನು ಇವನು, ಒಡವೆಯನ್ನು ಅಪಹರಿಸಿದವನು ಇವನು, ಎಂದು ತಿಳುಕೊಂಡು, ಮೋಸಗಾರ ಹುಡುಗನನ್ನು ಕುರಿತು ಎಲಾ ಹುಡುಗಾ, ನೀನು ಎಷ್ಟು ದಿವಸದಿಂದ ಈ ಬಂಟಿಯನ್ನು ಕಿವಿಯಲ್ಲಿ ಹಾಕಿ ಕೊಂಡಿದ್ದೀಯೆ ? ಎಂದು ಕೇಳಿದನು. ಅವನು ಅಯ್ಯಾ, ನನ್ನ ಐವನೇ ಪ್ರಾಯ ಮೊದಲು ಹಾಕಿ ಕೊಂಡಿದ್ದೇನೆ, ನನಗೆ ಈಗ ಪದಿನಾರು ವರುಷ ಅಂದನು. ಸಂಗಡಲೇ ಅಧಿಕಾರಸ್ಥನು ನಿಜಸ್ಥನಾದ ಹುಡುಗನನ್ನು ಕುರಿತು, ಎಲಾ ಹುಡುಗಾ, ನೀನು ಎಷ್ಟು ವರುಷ

ಈ ಬಂಟಿಯನ್ನು ಕಿವಿಯಲ್ಲಿ ಹಾಕಿ ಕೊಂಡಿದ್ದಿ ? ಎಂದು ಕೇಳಿದನು. ಅವನು ಅಯ್ಯಾ, ನನಗೆ ಏಳನೇ ವರುಷದಲ್ಲಿ ಮುಂಜಿ ಆಯಿತು, ಆಗ ನಮ್ಮಪ್ಪನು ಹತ್ತು ವರಹಾಕ್ಕೆ ಈ ಬಂಟಿ ಮಾಡಿಸಿ ನನ್ನ ಕಿವಿಯಲ್ಲಿ ಇಟ್ಟನು, ನಾನು ಅದನ್ನು ಹದಿನೈದು ದಿವಸದಿಂದ ಇವನ ಕಿವಿಯಲ್ಲಿ ಇಟ್ಟು ಪೇಚಾಡುತ್ತೇನೆ, ನನಗೀಗ ಬಂದು ಕಡಮೆ ಹದಿನಾರು ವರುಷವಾಗಿದೆ, ಅಂದನು. ಆಗ ನ್ಯಾಯಾಧಿಪತಿಯು ಪಂಚಾಯಿತರನ್ನು ನೋಡಿ, ಎಂಟು ವರುಷ ಬಂಟಿ ಇಕ್ಕಿದವನ ಕಿವಿಗೂ ಹನ್ನೊಂದು ವರುಷ ಬಂಟಿ ಇಕ್ಕಿದವನ ಕಿವಿಗೂ ಏನು ಹೆಚ್ಚು ಕಡಮೆ ಹೇಳರೆಂದನು. ಅವರು ಎಡೆ ಬಿಡದೆ ಎಂಟು ವರುಷ ಬಂಟಿ ಇಕ್ಕಿದ ಕಿವಿಗೆ ಎರಡು ಬಂಟಿಗಳನ್ನೂ ಹನ್ನೊಂದು ವರುಷ ಬಂಟಿ ಇಕ್ಕಿದ ಕಿವಿಗೆ ಮೂರು ಬಂಟಿಗಳನ್ನೂ ತಗಲಿಸುವಷ್ಟು ರಂಧ್ರಗಳು ಬೆಳದಿರ ಬಹುದೆಂದರು. ಅದ ಕೇಳಿ ನ್ಯಾಯಾಧಿಪತಿಯು ಪ್ರಾಮಾಣಿಕನಾದ ಹುಡುಗನ ಕಿವಿಗೆ ಹಂಚೀಕಡ್ಡಿ ಮೂರು ತುಂಡುಗಳನ್ನು ಇಡಿಸಲು, ಅದು ಸರಿಯಾಗಿ ಹಿಡೀತು. ಮೋಸಗಾರ ಹುಡುಗನ ಕಿವಿಗೆ ಬಂಟೀ ಮೇಲೆ ಬಂದು ಕಡ್ಡಿಯ ತುಂಡನ್ನು ಇಡಿಸುವಾಗಲೇ, ಅವನು ಅಯ್ಯೋ ! ಅಪ್ಪಾ ! ನೋಯುತ್ತದೆ, ಅಂದನು. ನ್ಯಾಯಾಧಿಪತಿಯು ಬಂದು ತುಂಡಿಗೆ ನೊಂದರೆ ಇನ್ನೂ ಮೂರು ತುಂಡುಗಳ ನೋವಿಗೆ ತಡಿಯಲಾರಿ, ಅವನ ಬಂಟಿಯನ್ನು ಅವನಿಗೆ ಕೊಟ್ಟು ಬಿಟ್ಟು, ನಿನ್ನ ಹತ್ತ ಕಡುಕನ್ನು ನೀನು ತೆಕ್ಕೋ, ಎಂದು ತೀರ್ಪು ಮಾಡಲು, ಅವರು ಅದೇ ಪ್ರಕಾರ ನಡಕೊಂಡರು. ಹೀಂಗೆ ಧರ್ಮ ಪ್ರಭುಗಳು ನ್ಯಾಯವನ್ನು ಬಿಡದೆ ನಡಿಸುವರು.

---

## 54. THE MASTER AND THE HORSE-KEEPER.

## ೫೪. ಯಜಮಾನನೂ ಕಾಸ್ತಾರನೂ.

ಒಬ್ಬ ಅರಸನ ಬಳೀಲಿ ಒಂದು ಕುದುರೆ ಉಂಟು. ಅದು ಪಟ್ಟದ ಕುದುರೆಯಾಗಿ ಉತ್ತಮಾಶ್ವ ವೆನಿಸಿಕೊಂಡಿತ್ತು. ತರುವಾಯ ಕೆಲವು ಕಾಲಕ್ಕೆ ಅದು ಮುದಿಯಾಗಿ ಸತ್ತು ಹೋದ್ದರಿಂದ ಅದಕ್ಕೆ ಬದಲಾಗಿ ಲಕ್ಷಣವಾದ ಕುದುರೆಯನ್ನು ತೆಗದು ಕೊಂಡು ಬರುವ ಬಗ್ಯೆ ಅರಸನು ತನ್ನ ಬಳಿಯ ಇರುವವರಲ್ಲಿ ಅಶ್ವ ಪರೀಕ್ಷೆ ಚನ್ನಾಗಿ ತಿಳಿದ ಒಬ್ಬ ಸಾಮಾಜಿಕನನ್ನು ಅರಬ್ಬಿ ದೇಶಕ್ಕೆ ಕಳುಹಿಸಿದನು. ಆ ಸಾಮಾಜಿಕನು ಒಬ್ಬ ಆಳನ್ನು ಕರಕೊಂಡು ಅರಬಸ್ಥಾನದಲ್ಲಿ ಪ್ರವೇಶಿಸಿ, ಅಲ್ಲಿ ಬಾರಾ ಹಜಾರಿ, ತೇರಾ ಹಜಾರಿ, ಅಂದರೆ ಹನ್ನೆರಡು ಸಾವಿರ ಹದಿಮೂರು ಸಾವಿರ ವರಹಾಗಳ ಬೆಲೆಯುಳ್ಳ ಉತ್ತಮಾಶ್ವಗಳಲ್ಲಿ ಆರಿಸಿ, ದೇವಮಣಿ ಕಂಠಾಭರಣ ಮೊದಲಾದ ಒಳ್ಳೇ ಸುಳಿಗಳಿಂದ ಒಪ್ಪಿ ಪಟ್ಟಕ್ಕೆ ಯೋಗ್ಯವಾದ ಕುದುರೆಯನ್ನು ಹದಿನಾಲ್ಕು ಸಾವಿರ ವರಹಾ ಕ್ರಯ ಕೊಟ್ಟು ಕೊಂಡು ಕೊಂಡನು. ಆ ಕುದುರೆಯನ್ನು ತೆಗದು ಕೊಂಡು ಬರುವಾಗ ಅದಕ್ಕೆ ತಕ್ಕ ಕಾವಲು ಕಟ್ಟು ಮುಂತಾದ ಬಂದೋಬಸ್ತಿನಿಂದ ಬರುವದಕ್ಕೆ ಸಾವಕಾಶವಿಲ್ಲದೆ, ಜಾಗ್ರತೆಯಾಗಿ ತನ್ನ ಪಟ್ಣವನ್ನು ಸೇರ ಬೇಕೆಂಬ ಅಭಿಲಾಷೆಯಿಂದ, ತಾನೂ ಕುದುರೇ ಆಳೂ ಮಾತ್ರ ವಿಕಾ ಏಕಿ ಹೊರಟು ಮಾರ್ಗದಲ್ಲಿ ಬರುತ್ತಿರುವಾಗ, ಅಡವಿಯಲ್ಲಿ ಛತ್ರದಲ್ಲಿ ಒಂದು ರಾತ್ರಿ ಟಂಕಿ ಮಾಡ ಬೇಕಾಯಿತು. ಆಗ

ಸಾಮಾಜಿಕನು ಕುದುರೇ ಆಳನ್ನು ನೋಡಿ, ಎಲಾ, ಇದು ಉತ್ತಮಾಶ್ವವು, ನಾವು ಇಳಿದಿರುವ ಸ್ಥಳವು ಕಳ್ಳ ಕಾಕರಿಗೆ ಆಸ್ಪದವಾಗಿರುವಂತೆ ತೋರುತ್ತದೆ, ಆದ್ದರಿಂದ ಮೈಮರತು ನಿದ್ದೆ ಹೋಗ ಬೇಡ, ಏನಾದರು ಬಂದು ಬಿಳ್ಳೀ ಆಲೋಚನೆ ಮಾಡುತ್ತಾ ಎಚ್ಚರವಾಗಿರೆಂದು ತಾನು ಒಳಗೆ ಮಲಗಿದನು. ಆಗ ಝಾಮ ರಾತ್ರಿ ಆಗಿತ್ತು. ಅದೇ ಮೇರಿಗೆ ಕುದುರೆಯವನು ಎಚ್ಚತ್ತಿರುವಾಗ ಸಾಮಾಜಿಕನು ಅರ್ಧ ರಾತ್ರಿಯಲ್ಲಿ ಆಳನ್ನು ಕೂಗಿತು, ಕುದುರೆಯವನೇ, ಎಚ್ಚರ ಉಂಟೋ, ಏನು ಆಲೋಚನೆ ಮಾಡುತ್ತೀ ? ಎಂದು ಮಾತನಾಡಿಸಿದ್ದಕ್ಕೆ, ಅವನು ಅಯ್ಯಾ, ಎಚ್ಚರವಾಗಿದ್ದೇನೆ, ಈ ಆಕಾಶಕ್ಕೆ ಮೊದಲ್ಯಾವದು ? ತುದಿ ಯಾವದು ? ಇದು ಕಂಬಗಳಿಲ್ಲದೆ ಹ್ಯಾಗೆ ನಿಂತಿದೆ ? ಇದಕ್ಕೆ ಚಂದ್ರ ನಕ್ಷತ್ರಗಳು ಹ್ಯಾಗೆ ಅಂಟಿಕೊಂಡವೆ ? ಎಂದು ಆಲೋಚನೆ ಮಾಡುತ್ತೇನೆ, ಅಂದನು. ಸಾಮಾಜಿಕನು ಸರಿ ಸರಿ ಹಾಗೇ ಇರು, ಎಂದು ಹೇಳಿದನು. ಮೂರು ಝಾಮವಾಗುವದೂ ಸಾಮಾಜಿಕನು ಪುನಃ ಎಲಾ ಕುದುರೆಯವನೇ, ಈಗ ಏನು ಆಲೋಚನೆ ಮಾಡುತ್ತೀ ? ಎಂದು ಕೇಳಿದ್ದಕ್ಕೆ, ಅವನು ಬುದ್ಧೀ, ಈ ಭೂಮಿ ಎಷ್ಟು ದೊಡ್ಡದು ? ಈ ಭೂಮಿಯ ಸುತ್ತ ಇರುವ ಸಮುದ್ರವು ಹ್ಯಾಗೆ ಹುಟ್ಟಿತು ? ಇದನ್ನು ಅಗದವರ್ಯಾರು ? ಅಗದ ಮಣ್ಣೆಲ್ಲಾ ಎಲ್ಲಿ ಹಾಕಿದರು ? ಅದೇ ಬೆಟ್ಟಗಳೋ ? ಎಂದು ಆಲೋಚನೆ ಮಾಡುತ್ತೇನೆ ಎಂದನು. ಸಾಮಾಜಿಕನು ಸರಿ ಸರಿ, ಹಾಗೆ ಎಚ್ಚರಿಕೆಯಾಗಿರೆಂದು ಹೇಳಿ ತಾನು ಒಳಕ್ಕೆ ಹೋದನು. ನಾಲ್ಕನೇ ಝಾಮ ಹುಟ್ಟುತ್ತಲೇ ಅದುವರಿಗೆ ನಿದ್ದೆ ಕಾದಿದ್ದ ಕುದುರೆಯವನಿಗೆ ಕಣ್ಣು ಬಿಕ್ಕೊಂ

ಡು ತೂಗಡಿಸಿ ಜೋಲಿ ಬಿದ್ದು ನಿದ್ದೆ ಬಂತು. ಅದೇ ಸಮಯ ದಲ್ಲಿ ಎರಡು ಮೂರು ಮಜಲುಗಳಿಂದ ಬೆನ್ನು ಹತ್ತಿ ಬಂದಿದ್ದ ಕಳ್ಳರು ಕುದುರೆಯ ಆಗಾಡಿ ಪಿಛಾಡೀ ಹಗ್ಗಗಳನ್ನು ಕವಲ ಮೊದಲಿನ ಹಾಗೆ ಬಿಚ್ಚಿ, ತಕ್ಕ ಲಗಾಮು ಬಾಯಿಗೆ ಕೊಟ್ಟು ಕಿಂಕರಾ ಅನ್ನದೆ ಅದನ್ನು ಹೊಡಕೊಂಡು ಹೋದರು. ಸಂ ಗಡಲೇ ಝೂಮ ಕಟ್ಟೀ ಪ್ರಕಾರಕ್ಕೆ ಸಾಮಾಜಿಕನೆದ್ದು ಕುದ ರೆಯವನೇ, ಈಗ ಏನು ಆಲೋಚನೆ ಮಾಡುತ್ತೀ ? ಎನ್ನಲು, ಅವನು ಅಯ್ಯಾ, ಈಗ ತಾನ ರವಷ್ಟು ತೂಕಡಿಸಿ ಎಚ್ಚರ ಬಿ ದ್ದದ್ದು ದಿಕ್ಕು ದಿಕ್ಕುಗಳ ನೋಡುತ್ತೇನೆ, ಕತ್ತಲೆ ಕಾವಳವೇ ಹೊರ್ತು ಕಟ್ಟಿದ ಕುದುರೆ ಕಾಣಿಸಲಿಲ್ಲ, ಕಳ್ಳರೇ ಬಿಚ್ಚಿಕೊಂ ಡು ಹೋಗಿರ ಬಹುದು, ಕುದುರೇ ಮಾತಂತು ಆಯಿತು, ಇದರ ಕೋಗೀರು ತಂಗು ಮುಂತಾದ ಸಾಮಾನುಗಳನ್ನು ನೀವು ಹೊರ ಬೇಕೋ ನಾನು ಹೊರ ಬೇಕೋ ? ಎಂಬ ದೊಡ್ಡ ಆಲೋಚನೆ ನನಗೆ ಹಿಡಿದದೆ ಅಂದನು.

ಅದಕ್ಕಾತನು, ಅಯ್ಯೋ! ಅಪ್ರಯೋಜಕನೇ, ಕೆಲಸಾ ಕೆ ಡಿಸಿದಿಯಲ್ಲಾ, ಎಂದು ದುಃಖ ಪಡುತ್ತಿದ್ದನು. ಕಾಸ್ತಾರನು ಅ ಯ್ಯಾ, ಯಾಕೆ ದುಃಖ ಪಡುತ್ತೀರಿ ? ಅರಸುಗಳಿಗೆ ಹಣಕ್ಕೇನು ಕಡಮೆ, ಒಂದು ಕುದರೆ ಹೋದರೆ ಮತ್ತೊಂದು ಬರುತ್ತದೆ, ಸ ದ್ಯ ತಂಗು ತಡಿಗಳು ಹೊರುವದಕ್ಕೆ ಕೂಲಿ ಆಳುಗಳು ಶಿಕ್ಕು ತ್ತಾರೋ ಇಲ್ಲವೋ ? ಅಂದನು. ಅಷ್ಟರಲ್ಲೀ ಬೆಳಗಾಯಿತು, ಸಂಗಡಲೇ ಸಾಮಾಜಿಕನು ಈ ಸಂಗತಿಗೆ ಕಾಗದ ಬರದು ಅ ರಸನ ಬಳಿಗೆ ಟಪಾಲು ಮೇಲೆ ಹಾಕಿದನು. ಅದು ಸೇರಿದ ದಿ ವಸವೇ ಕಳ್ಳರು ಆ ಪಟ್ಟಣಕ್ಕೆ ಹೋಗಿ ಆ ಕುದುರೆಯನ್ನು ಮಾ

ರುವದಕ್ಕೆ ಅದೇ ಅರಸನಿಗೆ ತೋರಿಸಿದರು. ಅರಸನು ಆ ಕುದುರೆಯನ್ನು ಪರೀಕ್ಷಿಸಿ ನೋಡುವಾಗ ಅದರ ಲಕ್ಷಣಗಳೂ ಅರ್ಜಿಯಲ್ಲಿ ಬರದಿರುವ ಚಹರೆಯೂ ಸರಾಸರಿಯಾಗಿ ಇದ್ದದ್ದರಿಂದ ತಕ್ಷಣದಲ್ಲೇ ಆ ಕಳ್ಳರನ್ನು ಕೈದಿನಲ್ಲಿಟ್ಟು, ಸಾಮಾಜಿಕನನ್ನು ಕರಿಸಿ ಸನ್ಮಾನಿಸಿ, ಕುದುರೆಯನ್ನು ತೋರಿಸಿ, ಅಪ್ರಯೋಜಕನಾದ ಕುದುರೆಯವನ ಮಾತುಗಳನ್ನು ಕೇಳಿ ನಕ್ಕು, ಒಬ್ಬನೇ ಕಾವಲಿದ್ದು ಮೈಮರತು ನಿದ್ದೆ ಹೋದ್ದರಿಂದ ತಪ್ಪೆಣಿಸದೆ, ಅವನನ್ನು ಮನ್ನಿಸಿ, ಕಳ್ಳರಿಗೆ ತಕ್ಕಷ್ಟು ದಂಡನೇ ವಿಧಿಸಿದನು. ಆದಕಾರಣ ಬೆಪ್ಪು ಮನುಷ್ಯನನ್ನು ಜೊತೆಯಾಗಿ ಪರಸ್ಥಳಕ್ಕೆ ಕರಕೊಂಡು ಹೋಗ ಬಾರದು.

---

## 55. THE DOG AND THE DONKEY.

### ೫೫. ನಾಯೂ ಕತ್ತೆಯೂ.

ಒಂದು ಊರಿನಲ್ಲಿ ಒಬ್ಬ ಅಗಸನಿದ್ದನು. ಅವನಿಗೆ ಮೂಟೆ ಹೊರುವದಕ್ಕೆ ಒಂದು ಕತ್ತೆಯೂ ಮನೇ ಕಾವಲಿಗೆ ಒಂದು ನಾಯೂ ಇತ್ತು. ಒಂದು ದಿವಸ ರಾತ್ರಿ ಅಗಸನು ಮಲಗಿ ನಿದ್ದೆ ಹೋಗುತ್ತಿರುವಾಗ, ಅವನ ಮನೆಯಲ್ಲಿರುವ ಬಟ್ಟೆಗಳನ್ನೆಲ್ಲಾ ಕದ್ದುಕೊಂಡು ಹೋಗ ಬೇಕೆಂದು ಕಳ್ಳರು ಬಂದರು. ಅವರ ಸುಳಿವನ್ನು ನಾಯಿ ತಿಳಿದೂ ತಿಳಿಯದ ಹಾಗೆ ಬಗಳದೆ ಸುಮ್ಮನೆ ಇತ್ತು; ಯಾಕಂದರೆ, ಆ ರಾತ್ರಿ ತನಗೆ ಹಿಟ್ಟು ಹಾಕಲಿಲ್ಲವೆಂಬ ಕೋಪದಿಂದಲೇ. ಆಗ ಕತ್ತೆ ಸುಮ್ಮನೆ ಇರದೆ ನಾಯನ್ನು

ನೋಡಿ, ಎಲಾ ಸೋಣಕನೇ, ಯಾಕೆ ಸುಮ್ಮಗಿದ್ದೀ, ಘಟ್ಟಿಯಾಗಿ ಬಗಳಿ ಎಜಮಾನನ್ನು ಎಬ್ಬಿಸು, ಅಗೋ ನೋಡು, ಕಳ್ಳರು ಬಂದು ಬಟ್ಟೇ ಮೂಟೆಗಳನ್ನು ಕದ್ದು ಕೊಂಡು ಹೋಗುತ್ತಾರೆ, ಎಂದು ಹೇಳಿತು. ನಾಯಿ ನಿನಗೇನು ಹೊತ್ತು ಹೋಗದೋ? ಸುಮ್ಮನೆ ಇರಲಾರೆಯೋ? ಬಟ್ಟೆಗಳಾದರು ಹೋಗಲಿ, ಅಗಸನಾದರು ಹೋಗಲಿ, ನಿನಗೇನು, ನನಗೇನು? ಈ ಕೆಟ್ಟ ಅಗಸಗಿತ್ತಿ ಈ ರಾತ್ರಿ ನನಗೆ ಹಿಟ್ಟೇ ಹಾಕಲಿಲ್ಲ, ಅಗಸನು ನಾಯಿಗೆ ಹಿಟ್ಟು ಹಾಕಿದಿಯಾ ಎಂದು ಕೇಳಲೂ ಇಲ್ಲ, ತಾನಾದರು ಒಂದು ತುತ್ತು ಹಾಕಲೂ ಇಲ್ಲ, ನನಗೆ ಹಸಿವಿನಿಂದ ಪ್ರಾಣ ಹೋಗುತ್ತದೆ, ಉಬ್ಬೆಯ ಬೂದಿಯಲ್ಲಿ ಛಳಿಗೆ ಮುದಿರಿ ಕೊಂಡಿದ್ದೇನೆ, ನನ್ನ ಮಾತಾಡಿಸ ಬೇಡ, ಒಂದು ರಾತ್ರಿ ತಿಂಡಿ ಹಾಕದ್ದಕ್ಕೆ ನನಗಿಷ್ಟು ರೋಷವೂ ಛಲವೂ ಉಂಟಾಗಿದೆ, ನೀನು ಹುಟ್ಟಿದ ದಿವಸದಿಂದ ನಿನ್ನನ್ನು ಈ ಅಗಸನು ಇರಳೆಲ್ಲಾ ಹಾಳು ಗೋಡೆಯಲ್ಲಿ ಕೂಡಿ ದಿನಾಲೂ ಉಪಾಸ ಹಾಕಿ ಕೊಲ್ಲುತ್ತಾನಲ್ಲಾ, ನಿನಗೆ ರೋಷವೂ ಛಲವೂ ಉಂಟಾಗಿದ್ದರೆ ನನ್ನ ಹಾಗೆ ನೀನೂ ಸುಮ್ಮನೆ ಇರು, ರೋಷವೂ ಛಲವೂ ಇಲ್ಲದಿದ್ದರೆ ನನಗೆ ಬದಲಾಗಿ ನೀನೇ ಕೂಗು, ನೀನು ಕೂಗಿದಾಗ್ಯೂ ಬಳ್ಳೇಯುವ ನೆನಿಸಿಕೊಂಬುವದಿಲ್ಲ, ಈ ಕೆಟ್ಟ ಅಗಸನ ಕೈಲಿ ದೊಣ್ಣೇ ಪೆಟ್ಟು ತಿಂತೀ, ಇಗೋ ನೋಡಿಕೋ, ಹೇಳದ್ದೇನೆ ಎಂದು ಖಂಡಿತವಾಗಿ ಹೇಳಿತು. ಆದಾಗ್ಯೂ ಸುಮ್ಮನೆ ಇರದೆ, ಆ ವಿವೇಕವಿಲ್ಲದ ಕತ್ತೆಯು, ತಳವನ್ನಿಗಿದು ಗೋಡೆಯನ್ನು ಮೇಲೆ ಕೆಡವಿಕೊಳ್ಳುವವನ ಹಾಗೆ ಮೈ ಮುರಿಯ ಪೆಟ್ಟಾಗುವದನ್ನರಿಯದೆ, ಹೋ ಎಂದು ಘಟ್ಟಿಯಾಗಿ ಕೂಗಿತು. ಆಗ ಎಮ್ಮೇ ತಮ್ಮನ ಹಾಗೆ

ಬಿದ್ದು ನಿದ್ದೆ ಹೋಗುವ ಮೊದ್ದಗಸನು ಬೆಬ್ಬರ ಬಿದ್ದಿದ್ದು, ಕೂಗುವ ಕತ್ತೆಯ ಉಪಕಾರವನ್ನೆಣಿಸದೆ, ಬಟ್ಟೆಗಳನ್ನು ಗಟ್ಟಿಸುವ ಕೋಪತಿಯಿಂದ ಕತ್ತೆಯ ಮೈ ಮುರಿಯ ಹೊಡೆದನು. ನಾಯ ಮಾತು ಕೇಳದೆ ಪೆಟ್ಟು ತಿಂದೆನಲ್ಲಾ ಎಂದು ಕತ್ತೆ ಸುಮ್ಮನಾಯಿತು. ಕಳ್ಳರ ಕೆಲಸ ಕೈ ಕೂಡಿತು. ಅಗಸನ ಮನೆ ಕೊಳ್ಳೆಯಾಯಿತು. ನಾಯಿಯ ಪಂತವಾಸಿ ಗೆದ್ದಿತು. ಹೀಗೆ ಒಬ್ಬರು ಮಾಡುವ ಕೆಲಸವ ಮತ್ತೊಬ್ಬರು ಮಾಡಿದರೆ ಅನರ್ಥವಾದೀತು.

---

## 56. THE MERCHANT AND THE BUFFOON.

### ೫೬. ಶೆಟ್ಟಿಯೂ ಹಾಸ್ಯಗಾರನೂ.

ಒಂದೂರಿಂದ ಒಬ್ಬ ಶೆಟ್ಟಿಯು ತನ್ನ ಹೆಂಡತಿಯನ್ನು ಕರಕೊಂಡು ಮತ್ತೊಂದೂರಿಗೆ ಹೋಗುತ್ತಿರುವಾಗ ನಡುದಾರಿಯಲ್ಲಿ ಮೊಣಕಾಲುದ್ದ ನೀರು ಹರಿಯುವ ಒಂದು ಕಾಲು ಹೊಳೆ ಅಡ್ಡಲಾಗಿ ಇತ್ತು. ಅದರಲ್ಲಿ ಹೆಂಡತಿಯನ್ನು ಮುಂದೆ ಬಿಟ್ಟು ತಾನು ಹಿಂದೆ ಹೋಗುತ್ತಿರಲಾಗಿ ಆ ಹೆಂಗಸು ಮಟ್ಟವಾದವಳಾದ್ದರಿಂದ ತನ್ನ ತೊಡೆಯುವರಿಗೂ ಹರಿಯುವ ನೀರಿನಲ್ಲಿ ಶೀರೆ ನೆನೆಯದ ಹಾಗೆ ಎತ್ತಿಕೊಂಡು ನಡದು ಬರುತ್ತಾ ಇದ್ದಳು, ಅದನ್ನು ಈಚೇ ದಡದಲ್ಲಿ ಕುಳಿತಿದ್ದ ಒಬ್ಬ ಹಾಸ್ಯಗಾರನು ಕಂಡು, ದಿಗ್ಗನೆ ಎದ್ದು, ಹೋ, ಹೋ, ಮೋಸ ಬಂತೆಂದು ನೀರಿನಲ್ಲಿಳಿದು ಬೇಗ ಆ ಹೆಂಗಸಿನ ಕೈ ಹಿಡಿದು ಕೊಂಡು ಗಡ್ಡೆಗೆ ಶೆಳಕೊಂಡದ್ದಲ್ಲದೆ,

ಅವಳ ಗಂಡನನ್ನು ನೋಡಿ, ಎಲಾ ಹುಚ್ಚಾ, ನೀನು ಎಂಥಾ ಕೆಟ್ಟ ಮನುಷ್ಯನು, ಹೆಂಗಸು ನೀರಿನಲ್ಲಿ ನಡೆದು ಬರುತ್ತಾ ಇದ್ದರೆ ಹಿಂದುಗಡೆಯಿಂದ ಬಂದು ಬೆದರಿಸುತ್ತೀಯಾ ? ಹಲ್ಲು ಮುರಿಯುತ್ತೇನೆ, ನೀನ್ಯಾರು, ಅವಳ್ಯಾರು, ಛೀ, ಆಚೆ ಹೋಗು, ಎಂದು ಬೆದರಿಸಿದನು. ಅದಕ್ಕಾ ಶೆಟ್ಟಿ ಘಾಬರಿ ಬಿದ್ದು ಎಲಾ ಅಪ್ಪಾ, ನಾನಂತು ಸೋಲೂರಿನಿಂದ ಬಂದ ಸೋಮಾರಿ ಶೆಟ್ಟಿ, ನನ್ನ ಹೆಂಡತಿ ಇವಳು, ಸಂಶಯವಿಲ್ಲ, ನೀನ್ಯಾರಪ್ಪಾ, ಶಾನೆ ಗದ್ದಲ ಮಾಡುತ್ತೀ, ಎಂದು ಕೇಳಿದ್ದಕ್ಕೆ, ಹಾಸ್ಯಗಾರನು ನೀನು ಶೆಟ್ಟಿಯೋ ಪಡಿ ಶೆಟ್ಟಿಯೋ, ಇವಳಿಗೆ ನೀನು ಗಂಡನಾದರೆ ನಿನಗೆ ನಾನು ಗಂಡನೋ? ನನ್ನ ಹೆಂಡತಿಯನ್ನು ನಿನ್ನ ಹೆಂಡತಿ ಎಂದು ಹೇಳುತ್ತೀಯಾ? ಹರಿದು ಹೋಗುವ ಹೊಳೆಯಲ್ಲಿ ಕೈ ಹಿಡಿದು ಮೇಲಕ್ಕೆ ಶೆಳೆಕೊಂಡ ನಾನು ಕಲ್ಲು ಗುಂಡಿನ ಹಾಗೆ ಇರುವಾಗ, ಹಿಂದೆ ಬಂದ ದಾರಿ ಹೋಕನಾದ ನೀನು ಇವಳಿಗೆ ಗಂಡನೆಂಬುವದಕ್ಕೆ ಯಾವ ದೃಷ್ಟಾಂತ ಕೊಡುತ್ತೀಯೋ ಕೊಡು, ನಡಿ ಪಂಚಾಯಿತರ ಬಳಿಗೆ, ಎಂದು ಶೆಟ್ಟಿಯ ಕೈಯನ್ನು ಬಲಗೈಯಿಂದಲೂ ಹೆಂಗಸಿನ ಕೈಯನ್ನು ಎಡಗೈಯಿಂದಲೂ ಹಿಡುಕೊಂಡು ನ್ಯಾಯಸ್ಥಾನಕ್ಕೆ ಹೋಗಿ, ನನ್ನ ಹೆಂಡತಿ ತನ್ನ ಹೆಂಡತಿ ಎಂದು ಈ ಉಭಯತ್ರರು ತಮ್ಮ ತಮ್ಮ ವ್ಯಾಜ್ಯದ ಸಂಗತಿಗಳನ್ನು ಹೇಳಿ ಕೊಳ್ಳುತ್ತಿರುವಾಗ, ಈ ಹೆಂಗಸು ಬಹಳ ಮಾನವಂತೆಯಾದ್ದರಿಂದ ಮಾತನಾಡದೆ ಸುಮ್ಮನೆ ಇದ್ದಳು. ಅವಳು ಹಾಗೆ ಸುಮ್ಮನೆ ಇದ್ದ ಕಾರಣದಿಂದಲೇ ಈ ನ್ಯಾಯವನ್ನು ತೀರಿಸುವದಕ್ಕೆ ನ್ಯಾಯಾಧಿಕಾರಿಗೆ ಸಂಶಯ ಉಂಟಾಗಿ, ಗುಟ್ಟಾದ ರಹಸ್ಯಗಳನ್ನು ಕೇಳಿ ತಿಳುಕೊಳ್ಳ ಬೇ

ಕೆಂದು ಈ ಶೆಟ್ಟಿಯನ್ನು ಕರದು ಇವಳು ನಿನ್ನ ಹೆಂಡತಿಯೆಂಬ ದಕ್ಕೆ ಇವಳಿಗಿರುವ ರಹಸ್ಯವಾದ ಅಂಗ ಮಚ್ಚೆ ಗುರ್ತುಗಳು ಯಾವದನ್ನಾದರು ಬಲ್ಲಿಯಾ ? ಎಂದು ಕೇಳಿದ್ದಕ್ಕೆ, ಆ ಶೆಟ್ಟಿಯು ಬೆಪ್ಪಾಗಿ, ಅಯ್ಯಾ, ನನಗಿವಳು ಹೆಂಡತಿ ಎಂಬ ಒಂದು ಮಾತು ಹೊರ್ತು ಮತ್ತ್ಯಾವದನ್ನು ನಾ ನರಿಯೆನೆಂದನು. ಸಂಗಡಲೇ ಈ ಪರಿಹಾಸಕನನ್ನು ವಿಚಾರಿಸಲಾಗಿ ಇವಳ ಎಡ ತೊಡೆಯಲ್ಲಿ ರುವ ಮಚ್ಚೆಯೇ ನನಗೆ ಗುರ್ತು ಎಂದನು. ಆ ಮಾತನ್ನು ಕೇಳಿ ಹೆಂಗಸರಿಂದ ಪರಿಕ್ಷೆ ನೋಡಿಸಿ ನಿಜವೆಂದೆಣಿಸಿ, ಈ ಶೆಟ್ಟಿಗೆ ಅನ್ಯಾಯ ಮಾಡುವದಾಗಿದ್ದ ಅಧಿಕಾರಿಯನ್ನು ನೋಡಿ, ಅವನು ಅಯ್ಯಾ, ನಾನು ಹಾಸ್ಯಗಾರನು, ಅಪಹಾಸ್ಯಕ್ಕಾಗಿ ಈ ಪ್ರಕಾರ ಮಾಡಿದೆನೆಂದು ನಡದ ಸಂಗತಿಯನ್ನೆಲ್ಲಾ ತಿಳಿಸಿದನು. ನ್ಯಾಯಾಧಿಪತಿಯು ಮಾನ ಹೋಯಿತಲ್ಲಾ ಎಂದು ಕೇವಲ ಖಿನ್ನನಾಗಿರುವ ಶೆಟ್ಟಿಯನ್ನು ಸಮದಾಯಿಸಿ ಅವನ ಹೆಂಡತಿಯನ್ನು ಅವನ ಸಂಗಡ ಕಳುಹಿಸಿದನು. ಹಾಸ್ಯಗಾರನಿಗೆ ಇನ್ನು ಮೇಲೆ ಹೀಗೆ ಮಾಡ ಬೇಡವೆಂತ ಹೇಳಿದನು. ನ್ಯಾಯಾಧಿಕಾರಿಗಳು ಎಷ್ಟು ಬುದ್ಧಿವಂತರಾಗಿದ್ದಾಗ್ಯೂ ಅನ್ಯಾಯಗಳು ಘಟಿಸದಂತೆ ದೇವರೇ ರಕ್ಷಿಸ ಬೇಕು.

---

## 57. KRISTNARAYA AND THE BUFFOON.

### ೫೭. ಕೃಷ್ಣರಾಯನೂ ಏಕಚಕ ಬಾಚಿಕನೂ.

ನರಪತಿ ಕೃಷ್ಣರಾಯರ ಆಳಿಕೆಯಲ್ಲಿ ತೆನ್ನಾಲ ರಾಮ ಕೃಷ್ಣನು ವಿಕಟಕವಿ, ಅವನ ಮಗನು ಭಾಸ್ಕರ ಕವಿ, ಇವನಿಗೆ

ತಪ್ಪವದ ಹೆಸರು ಬಾಚಿಕನು. ಇವನನ್ನು ಏಕಚಕ್ರಬಾಚಿಕ ನೆಂದು ಕರಿಯುವದುಂಟು. ಏಕಚಕ್ರವಂದರೆ ಪರಿಹಾಸ್ಯ, ಇದ ರಿಂದ ಹಾಸ್ಯಗಾರ ಭಾಸ್ಕರ ಕವಿ ಎಂಬ ಅರ್ಥವಾಯಿತು. ಇವ ನ ವಿನೋದಗಳು ತಂದೆಯ ವಿನೋದಗಳಿಗಿಂತಲೂ ಹೆಚ್ಚಾಗಿರು ವವು. ಈ ಬಾಚಿಕನು ಎಂಟು ಹತ್ತು ವರುಷದವನಾಗಿರುವಾ ಗ ಕೈಲಾಗದ ಹುಡುಗನೆಂದು ತಂದೆಯಿಂದ ನಿಂದಿಸಲ್ಪಟ್ಟು, ರೋ ಷಗೊಂಡು, ಅಪ್ಪಾ, ನಾಳೇ ದಿವಸ ರಾಯನಿಂದ ಬಹುಮಾನ ಹೊಂದಿ ಬರುತ್ತೇನೆ, ನೋಡೆಂದು ಪ್ರತಿಜ್ಞೆ ಮಾಡಿದನು. ಆ ಮಾತಿಗೆ ನಕ್ಕು ಸುಮ್ಮನಿದ್ದ ತಂದೆಗೆ ಹೇಳದ ಹಾಗೆ ಮರುದಿವ ಸ ಬೆಳಗಾಗುವದಕ್ಕೆ ಮುಂಚಿತವಾಗಿಯೇ ಹಾಸಿಗೆಯಿಂದ ಎದ್ದು ಹೊರಟು ಹೋಗಿ ರಾಯನು ನಿತ್ಯವೂ ವಿಮಾನ ದರ್ಶನ ಮಾ ಡುವ ದೇವೀ ದೇವಸ್ಥಾನದ ಗೋಪುರದ ಮೇಲಕ್ಕೆ ಹತ್ತಿ, ಲಂಗೋಟಿ ಹೊರ್ತು ಬತ್ತಲೆ ಮೈಯಿಂದ ರಾಯನ ಅರಮನೆ ಗಮರಾಗಿ, ಅಂಡು ತಿರಿಗಿಸಿ ಬಗ್ಗಿ, ಗೋಪುರದ ಕೊಟ್ಟ ಕೊನೆ ಯಲ್ಲಿ ಕೂತು ಕೊಂಡನು.

ಹೀಗಿರುವಾಗ ಸೂರ್ಯೋದಯ ಕಾಲಕ್ಕೆ ರಾಯನು ಉನ್ನ ತವಾದ ಉಪ್ಪರಿಗೆಯಲ್ಲಿ ಹಂಸ ತೂಲಿಕಾ ತಲ್ಪವೆಂಬ ಹಂಸ ಪ ಕ್ಷಿಗಳ ಪುಡಿರೆಕ್ಕೆಗಳು ತುಂಬಿ ಹೊಲಿದಿರುವ ರಾಜಯೋಗ್ಯ ವಾದ ಹಾಸಿಗೆಯಿಂದ ಎದ್ದು, ನಾನಾ ವಿಧವಾದ ಮಂಗಳವಾದ್ಯ ಧ್ವನಿಗಳನ್ನು ಕೇಳುತ್ತಾ, ನಿತ್ಯ ಕಟ್ಟಲೆ ಮೇರಿಗೆ ದೇವೀ ದೇವ ಸ್ಥಾನದ ವಿಮಾನ ದರ್ಶನವನ್ನು ಮಾಡುವದಕ್ಕಾಗಿ ಕಿಟಿ ಕೀ ಬಾಗಲು ತೆರದು ನೋಡಿದನು. ಆಗ ರಾಯನ ದೃಷ್ಟಿ ಯು ಮುಂಭಾಗದ ಗೋಪುರದ ಕೊಟ್ಟ ಕೊನೆಯಲ್ಲಿ ಬಗ್ಗಿ

ಕೊಂಡಿರುವ ಬಾಚಿಗನ ಅಂಡಿನ ಮೇಲೆ ಬಿತ್ತು. ಆ ಬಿಳಿ
ಕ ವಿಮಾನ ದರ್ಶನವಾಯಿತು. ಆಗ ರಾಯನಿಗೆ ಬಹಳ
ಕೋಪ ಬಂದು ಆತನು ಇಷ್ಟು ಹೊತ್ತಿಗೆ ಈ ಪ್ರಕಾರ
ನಮಗೆ ಕಾಣಿಸಿದವನಿಗೆ ಪ್ರಾಣಾಜ್ಞೆ ಆಗಲೆಂದು ಹಜಿಶಿಯುವ
ರಿಗೆ ಹುಕುಂ ಕಳುಹಿಸಿದನು. ತಕ್ಷಣದಲ್ಲೇ, ಅವರು ಯ
ಮದೂತರ ಹಾಗೆ ಬಂದು, ಗೋಪುರದಿಂದಿಳಿದು ಓಡಿ ಹೋ
ಗುತ್ತಿರುವ ಬಾಚಿಗನನ್ನು ಹಿಡಿದು, ಕೆಂಪು ಬಣ್ಣದ ಹಗ್ಗಗಳಿಂ
ದ ಮುಷ್ಕೀ ಕಟ್ಟಿ, ಎಲಾ ತಲೆ ಹೋಕನೇ, ತಲೆ ಹೊಡಿಸಿ
ಕೋ ನಡಿ, ಎಂದು ತಳ್ಳಿದರು. ಆಗ ಬಾಚಿಕನು ಇದೇನಿರೈ
ಯ್ಯಾ, ಮೂರುಮಂದಿ ಸರಿಯಾಗಿ ಬಂದಿದ್ದೀರಿ, ನನ್ನ ಮುಂ
ದುಗಡೆ ಒಬ್ಬನು, ಹಿಂದುಗಡೆ ಒಬ್ಬನು, ಇಬ್ಬರು ಸಾಲದೋ?
ನಟ್ಟನಡುವೆ ಮೂರನೆಯವನು ಯಾತಕ್ಕೆ? ಹಿಡುಕೊಂಡು
ನೇತಾಡುವದಕ್ಕೋ? ನನ್ನ ರೆಟ್ಟೆಗೆ ವ್ಯರ್ಥವಾಗಿ ಈ ಹಗ್ಗಗ
ಳನ್ನು ಯಾತಕ್ಕೆ ಕಟ್ಟುತ್ತೀರಿ? ನೀವು ಮೂರು ಮಂದಿಯೂ
ಒಬ್ಬರಿಗೊಬ್ಬರು ಈ ಹಗ್ಗದಿಂದ ಹಿಂಗಟ್ಟು ಮುರಿ ಕಟ್ಟಿ ಕೊಂ
ಡು ಮುಂದೆ ನಡದರೆ ನಾನು ಹಿಂದೆ ಬರಲಾರೆನೋ? ಈ ಕೆಂಪು
ಹಗ್ಗಗಳು ರಾಯನ ಕೊರಳಿಗೆ ಬಿದ್ದರೆ ಬಲು ಚನ್ನಾಗಿ ನೋಡ
ಬಹುದು, ರಾಯನನ್ನು ನಾನು ಕಂಡು ಬಂದೆರಡು ಮಾತು ಕೇ
ಳ ಬೇಕೆಂದು ಇದ್ದೇನೆ, ನನ್ನ ಅಭಿಪ್ರಾಯವನ್ನು ಧೊರೆಗೆ ತಿಳಿ
ಸಿರಿ, ಆ ತರುವಾಯ ನೀವು ಮಾಡುವ ಕೆಲಸವನ್ನು ಮಾಡಿರಿ,
ಎಂದು ಭಯವಿಲ್ಲದೆ ಮಾತನಾಡಿದನು. ಅದನ್ನು ಆ ಮೂರು
ಮಂದಿಯಲ್ಲಿ ಒಬ್ಬನು ರಾಯರಿಗೆ ವರದಿ ಮಾಡಿದನು. ಆ ಮಾ
ತು ಕೇಳಿ ಆ ರಾಜನು ಅಪರಾಧಿಯನ್ನು ನಮ್ಮೆದುರಿಗೆ ತಂದು

ನಿಲ್ಲಿಸಿರೆಂದು ಆಜ್ಞಾಪಿಸಲು, ಅದೇ ಪ್ರಕಾರ ರಾಜ ಸಭಾಮಂ
ಟಪಕ್ಕೆದುರಾಗಿ ಬಾಚಿಕನು ಬಂದು ನಿಂತು, ಎಲೈ ಪ್ರಭುವೇ,
ನನ್ನ ಹಿಂಭಾಗವು ನಿನಗೆ ಉದಯ ಕಾಲದಲ್ಲಿ ಕಾಣಿಸಿದ್ದರಿಂದ
ನಿನಗೆ ಕೆಡೇನೂ ಸಂಭವಿಸಲಿಲ್ಲವಲ್ಲಾ, ನಿನ್ನ ಮುಖವನ್ನು
ನಾನು ನೋಡಿದ ಮಾತ್ರದಿಂದಲೇ ನನ್ನ ತಲೆ ಹೋಗುವ ಆಜ್ಞೆ
ಬಂತು, ಈಗ ಲಕ್ಷಣವಾದ್ದು ನನ್ನ ಕುಂಡೆಯೋ ನಿನ್ನ ಮುಂ
ಡೆಯೋ ತಿಳಿದು ಹೇಳೆಂದನು. ಆ ಮಾತಿಗೆ ರಾಯನು ನಾಚಿಕೆ
ಪಟ್ಟು ನಕ್ಕು ಇವನು ಬಾಚಿಕನೆಂದರಿಯದೆ ಈ ನೀಚ ಯೋ
ಚನೆಯನ್ನು ಮಾಡಿದೆನು, ವ್ಯರ್ಥವಾಗಿ ಬ್ರಹ್ಮ ಹತ್ಯ ಬರುತ್ತಾ
ಇತ್ತು, ದೇವರು ತಪ್ಪಿಸಿದನೆಂದು ಪಶ್ಚಾತ್ತಾಪ ಪಟ್ಟು, ಏಕಚಕ
ಬಾಚಕನನ್ನು ಬಿಡಿಸಿ ಮನೆಗೆ ಕಳುಹಿಸಿದನು. ಈಪ್ರಕಾರ
ಹಾಸ್ಯಗಾರರು ಮಾಡುವ ವಿನೋದಗಳಿಗೆ ಪ್ರಭುಗಳು ಸಂತೋ
ಷ ಪಡುವದಲ್ಲದೆ ಕೋಪ ಮಾಡುವದಿಲ್ಲ.

---

## 58. THE TAILOR BIRD AND THE MONKEY.

### ೫೮. ಗೀಜಿಗ ಹಕ್ಕಿಯೂ ಕೋತಿಯೂ.

ಒಂದು ನದೀ ತೀರದಲ್ಲಿ ಒಂದು ಮರದಲ್ಲಿ ಗೀಜಿಗ ಹಕ್ಕಿ
ಯು ಗೂಡು ಕಟ್ಟಿ ಕೊಂಡು, ಹೆಣ್ಣು ಹಕ್ಕಿ ಮರಿಗಳು ಮೊ
ಟ್ಟೆಗಳು ಸಹಿತ, ಸುಖದಿಂದ ಇತ್ತು. ಗೀಜಿಗನ ಗೂಡು ಬಲು
ಆಯಕಟ್ಟಾದ್ದು. ಮೆತ್ತಗೆ ಉದ್ದವಾಗಿ ಗಟ್ಟಿಯಾಗಿರುವ ನಶೇ
ಹುಲ್ಲನ್ನು ಆದು ಕೊಂಡು ಬಂದು ಆ ಪಕ್ಷಿಯು ಮನುಷ್ಯರು

ಚಾಪೆ ಮುಂತಾದವುಗಳನ್ನು ಹೆಣೆಯುವದಕ್ಕಿಂತ ಹೆಚ್ಚು ಚಮತ್ಕಾರವಾಗಿ ಗೂಡನ್ನು ಹೆಣೆಯುವದು. ಆ ಗೂಡು ಮೂರು ನಾಲ್ಕು ಪದರಗಳಾಗಿರುವದು. ಒಳಗೆ ಅಂತಸ್ತುಗಳೂ ಮೊಟ್ಟೆಗಳಿಗೆ ಮರಿಗಳಿಗೆ ಹೆಣ್ಣು ಹಕ್ಕಿಗೆ ತನಗೆ ಬೇರೆ ಬೇರೆ ಸ್ಥಳಗಳೂ ಅಲ್ಲಲ್ಲಿ ಹಾಸಿಗೆಗಳೂ ಸಹ ಮಾಡಿ ಇರುವದು. ಒಂದೊಂದು ಅಂತಸ್ತಿಗೆ ಒಂದೊಂದು ಮಿಣುಕು ಹುಳಗಳನ್ನು ಪ್ರಾಣದಿಂದ ತಂದು ತಗಲಿಸಿರುವದು. ಆ ಹುಳದ ಹಿಂಭಾಗದಲ್ಲಿ ಯಾವಾಗಲೂ ಮಿಂಚುವ ಬೆಳಕು ಈ ಪಕ್ಷಿಯ ಗೂಡಿಗೆ ರಾತ್ರಿಯಲ್ಲಿ ದೀಪವಾಗಿರುವದು. ಗೂಡಿನ ಕೆಳಗಡೆ ಇರುವ ದಾರಿಗೆ ಬಾಗಲು ಸಹ ಇರುವದು. ಅದು ಕೊಂಬುಸೋರೆಕಾಯಿ ಗಾಜಿನ ಬುಡ್ಡಿ, ಗದೆ, ಇಂಥಾದ್ದರ ಹಾಗೆ ಇರುವದು. ಅದು ಮರದ ಕೊಂಬೆಯಲ್ಲಿ ನೇತಾಡುತ್ತಾ ಇರುವದರಿಂದ ಘಾಳಿಗೆ ತೂಗುವದಲ್ಲದೆ ಹರಿದು ಬೀಳುವದಿಲ್ಲ. ಅದಕ್ಕೆ ಕೆಳಗಡೆ ದಾರಿ ಇರುವದರಿಂದ ಮಳೆಯ ಭಯವೂ ಇಲ್ಲ. ಇಂಥಾ ಗೂಡಿನಲ್ಲಿ ಈ ಹಕ್ಕಿಯು ತನ್ನ ಸಂಸಾರದೊಡನೆ ವಾಸವಾಗಿರುವಾಗ ಒಂದು ದಿವಸ ದೊಡ್ಡ ಮಳೆ ಬಂತು. ಆ ಮಳೆಯಲ್ಲಿ ಒಂದು ಗಂಡು ಕೋತಿ ಶಿಕ್ಕಿ ನೆನದು ಬಹಳ ಕಷ್ಟ ಪಟ್ಟು, ತಲೆ ಮರಸಿ ಕೊಳ್ಳುವದಕ್ಕೆ ಸ್ಥಳವಿಲ್ಲದೆ ಈ ಹಕ್ಕಿ ಗೂಡು ಮಾಡಿಕೊಂಡಿರುವ ಮರದ ಬುಡದಲ್ಲಿ ಬಂದು ಕೂತು ಕೊಂಡಿತು.

ಆಗ ತೂಗು ಮಂಚದ ಮೇಲೆ ತೂಗಾಡುವ ರಾಯನ ಹಾಗೆ ಗೂಡಿನಲ್ಲಿ ತೂಗಾಡುತ್ತಿರುವ ಈ ಗೀಜಗನು ಕೋತಿಯನ್ನು ಕಂಡು, ಓ ಕೋತಿಯೇ, ನಿಂಬೇಕಾಯಿಗಾತ್ರವಿರುವ ನನ್ನನ್ನು ನೋಡಿದಿಯಾ? ಈ ಮಳೆಗೂ ಘಾಳಿಗೂ ಭಯವಿಲ್ಲದ ಹಾಗೆ

ಎಷ್ಟೋ ಚನ್ನಾಗಿ ಗೂಡು ಕಟ್ಟಿ ಕೊಂಡು ಸಂತೋಷದಿಂದ ತೂಗಾಡುತ್ತೇನೆ, ನಿನಗೆ ಮನುಷ್ಯರ ಹಾಗೆ ಕೈ ಕಾಲು ಬಲ ಬುದ್ಧಿ ಮಾತ್ರವಲ್ಲದೆ ಉದ್ದವಾದ ಬಾಲ ಸಹ ಇದೆ, ಇಷ್ಟು ಇದ್ದಾಗ್ಯೂ ಒಂದು ಗೂಡು ಕಟ್ಟಿ ಕೊಳ್ಳಲಾರದೆ, ಮಳೆಯ ಲ್ಲಿ ಶಿಕ್ಕಿ ಪೇಚಾಡುತ್ತಾ ಹಲ್ಲು ಕಿರಿಯುತ್ತೀ, ಸೋಮಾರಿಗಳಿ ಗೆ ಸುಖ ಉಂಟೋ ? ಎಂದು ಗರ್ವದಿಂದ ನಿಂದಿಸಲು, ಕೋತಿ ಗೆ ಮಹಾ ಕೋಪ ಹುಟ್ಟಿ ಅದು ತಕ್ಷಣದಲ್ಲೇ ಮರಾ ಹತ್ತಿ ಅ ದರ ಗೂಡನ್ನು ಕಿತ್ತು ಹರಿಯುವ ನೀರಿನಲ್ಲಿ ಬಿಸಾಡಿ ಬಿಟ್ಟಿತು. ಆಗ ಮೊಟ್ಟೆಗಳು ಮರಿಗಳು ಹುಟ್ಟು ಗೆಟ್ಟು ಹೋದ್ದನ್ನು ಕಂಡು ಬಹು ದುಃಖ ಪಟ್ಟು, ಗೀಜಗವು ನ್ಯಾಯಾಧಿಪತಿಯ ಬಳಿಗೆ ಬಂದು ತನಗೆ ಕೋತಿ ಮಾಡಿದ ಅಪಕಾರವನ್ನೂ ತಾನು ಕೋತಿಗೆ ಹೇಳಿದ ಉಪಕಾರದ ಬುದ್ಧಿ ಮಾತನ್ನೂ ಸರಿಯಾಗಿ ತಿಳಿಸಿತು. ಆಗ ಹಿಡು ಕೊಂಡು ಬಾ ಕೋತಿಯನ್ನು ಎಂದು ಗದ್ದಿಸುವ ಅಧಿಕಾರಿಯ ಸಮಿಾಪಕ್ಕೆ ಭಯದಿಂದ ಬರುವ ಈ ಕೋತಿಯು ಮಾರ್ಗದಲ್ಲಿ ಫಲಿಸಿರುವ ಹಲಸಿನ ಮರದಲ್ಲಿ ಪಕ್ವ ವಾದ ದೊಡ್ಡ ಹಣ್ಣನ್ನು ಕಿತ್ತು ಹೊತ್ತು ಕೊಂಡು ಬಂದು ಅಧಿ ಕಾರಿಯ ಹಿಂದುಗಡೆ ತಂದಿಟ್ಟು ಬಿಟ್ಟು ಮುಂದುಗಡೆಗೆ ಬಂದು ಕೂತು ವಿನಯದಿಂದ ಕೈ ಮುಗಿಯಲು, ಅಧಿಕಾರಿಯು ಎಲಾ ದುಷ್ಟ ಕೋತಿಯೇ, ಮಳೆಯಲ್ಲಿ ನೆನದು ಕಷ್ಟ ಪಡದ ಹಾಗೆ ಒಂ ದು ಮನೆ ಕಟ್ಟಿಕೋ ಬಾರದೇ ಎಂದು ಬುದ್ಧಿ ಕಲಿಸಿದ ಈ ಗೀ ಜಿಗನ ಮರಿಗಳು ಸಾಯುವ ಹಾಗೆ ಇದರ ಗೂಡನ್ನು ಕಿತ್ತು ಬಿ ಸಾಡಿದಿಯೋ ? ನಿನ್ನ ಕೈಯನ್ನು ಕತ್ತರಿಸುವದಲ್ಲದೆ ದೊಡ್ಡ ಬಾಚಿಯಿಂದ ಹಲಸಿನ ಕಾಯಿ ಕೆತ್ತಿ ಕೊಡುವ ಹಾಗೆ ನಿನ್ನ

ಮೈಯನ್ನು ಕೆತ್ತಿ ಕತ್ತರಿಸಿ ಚೂರು ಚೂರು ಮಾಡಿಸುತ್ತೇನೆ ಎಂದು ಬೆದರಿಸಿದನು. ಕೋತಿ ಬುದ್ಧಿ ಬುದ್ಧಿ ಸ್ವಾಮಿಯವರು ಹಿಂದು ಮುಂದು ನೋಡಿ ಮಾತಾಡ ಬೇಕೆಂದು ಹೇಳಲು, ನ್ಯಾಯಾಧಿಪತಿ ತನ್ನ ಹಿಂದುಗಡೆಗೆ ತಿರುಗಿ ಹಲಸಿನ ಹಣ್ಣನ್ನು ಕಂಡು ಸಂತೋಷಿಸಿ, ಸಂಗಡಲೇ ಗೀಜಗಹಕ್ಕಿಯನ್ನು ನೋಡಿ ಎಲೈ ಅಲ್ಪ ಜೀವಿಯೇ, ಹಿರಿಯರು ಕಿರಿಯರು ಎಂಬ ತಾರತಮ್ಯಗಳಿಲ್ಲದೆ ಬೆಟ್ಟವು ಹಣ್ಣಾದ ಹಾಗೆ ಇರುವ ಈ ಕೋತಿಯನ್ನು ಹುಟ್ಟು ಗರ್ವಿಯಾದ ನೀನು ನಿಂದಿಸಿ ಮಾತಾಡಿಸಿದ್ದು ಬಹಳ ಅನುಚಿತ, ಆದಾಗ್ಯೂ ಈ ಸರ್ತಿ ಈ ತಪ್ಪು ಮನ್ನಿಸಿ ಇದ್ದೇನೆ, ಇನ್ನು ಮೇಲೆ ಗರ್ವ ಪಡದೆ ಇರು, ಹೋಗೆಂದು ಕಳುಹಿಸಿ, ಕೋತಿಯನ್ನು ಮೆಚ್ಚಿ ಕೊಂಡನು. ಈ ಮೇರಿಗೆ ನ್ಯಾಯಾಧಿಪತಿಗಳು ಅಪ್ರಾಮಾಣಿಕರಾದರೆ ನೀತಿ ಕೆಟ್ಟು ಪ್ರಜೆಗಳಿಗೆ ಬಹು ಸಂಕಟ ಉಂಟಾಗುತ್ತದೆ.

---

## 59. TENNALA RAMAKRISHNA'S DRAWINGS.

### ೫೯. ತೆನ್ನಾಲ ರಾಮ ಕೃಷ್ಣನು ಚಿತ್ರಿಸಿದ್ದು.

ನರಪತಿ ಕೃಷ್ಣರಾಯನು ಅನೇಕ ದ್ರವ್ಯವನ್ನು ಮುಟ್ಟಿಸಿ ಭುವನೇಶ್ವರಿ ಎಂಬ ದೊಡ್ಡ ಅರಮನೆಯನ್ನು ಕಟ್ಟಿಸಿ ಅದರ ತುಂಬಾ ಬುದ್ಧಿವಂತರಾದ ಚಿತ್ರಗಾರರಿಂದ ನಾನಾ ವಿಧವಾದ ಭಾವ ಚಿತ್ರಗಳನ್ನು ಬರಿಸಿದನು. ಈ ಪ್ರಕಾರ ಚಿತ್ರ ವಿಚಿತ್ರವಾದ ಅಲಂಕಾರಗಳಿಂದ ಸಂಪೂರ್ಣವಾಗಿ ಒಪ್ಪಿ ಇರುವ ಅರಮನೆಯನ್ನು ನೋಡುವದಕ್ಕಾಗಿ ರಾಯನು, ಮಂತ್ರಿ ಅ

ಪ್ಪಾಜಿ, ರಾಮಕೃಷ್ಣ ಕವಿ ಮುಂತಾದವರೊಡನೆ ಕೂಡಿ ಬಂದು ಬಂದು ಕಡೆಯಿಂದ ಪ್ರಾಂಜ್ಞವಾಗಿ ಆ ಚಿತ್ರಗಳನ್ನು ನೋಡುತ್ತಾ ಬರುವಲ್ಲಿ, ವಿಶೇಷವಾಗಿ ವಾಲಿ ಸುಗ್ರೀವರ ಚಿತ್ರವನ್ನು ನೋಡುತ್ತಾ ನಿಂತನು. ಆಗ ವಿಕಟಕವಿ ರಾಮಕೃಷ್ಣನು ರಾಯನನ್ನು ನೋಡಿ ಎಲೈ ಮಹಾ ಪ್ರಭುವೇ, ಈ ಎರಡು ಪ್ರತಿಮೆಗಳಿಗೂ ಒಂದೇ ಹೋಲಿಕೆಯಾದ ಅವಯವಗಳಿರುವದು ಸರಿಯೇ, ಆದರೆ ಒಂದೊಂದಕ್ಕೆ ಎರಡು ಮೇರಿಗೆ ನಾಲ್ಕು ಕಣ್ಣು ಇತ್ತೋ? ಅಲ್ಲದೆ ಇಲ್ಲಿ ಚಿತ್ರಿಸಿರುವ ಹಾಗೆ ವಾಲಿ ಸುಗ್ರೀವರಿಬ್ಬರಿಗೂ ಒಟ್ಟಿಗೆ ಎರಡೇ ಕಣ್ಣಿತ್ತೋ? ಇದಲ್ಲದೆ ಇವರಿಬ್ಬರಿಗೂ ಅರ್ಧಾರ್ಧ ಮುಖಗಳಾಗಿವೆ, ಕಡಮೆ ಅರ್ಧ ಮುಖ ಭಂಗವಾಯಿತೋ ಏನು? ಅಂದನು, ಅದಕ್ಕೆ ರಾಯನು ನಕ್ಕು, ರಾಮಕೃಷ್ಣಾ, ನಿನಗೆ ಇಷ್ಟು ಮಟ್ಟಿಗೆ ತಿಳಿಯಲಿಲ್ಲವ್ರೋ? ಅದು ಆ ಕಡೆ ಇರುವ ಭಾವವು. ಪೂರ್ಣ ಚಿತ್ರ ಅರ್ಧ ಚಿತ್ರ ಇತ್ಯಾದಿ ಭಾವ ಚಿತ್ರಗಳ ಲಕ್ಷಣಗಳನ್ನು ನೀನು ತಿಳುಕೋಬೇಕು ಅಂದನು. ರಾಮಕೃಷ್ಣನು, ಬುದ್ಧಿ, ಹಾಗೋ, ಅಪ್ಪಣೇ ಪ್ರಕಾರಕ್ಕೆ ಇನ್ನು ಮೇಲೆ ತಿಳುಕೊಳ್ಳುತ್ತೇನೆ, ಎಂದು ವಿನಯದಿಂದ ಕೈ ಮುಗಿದನು. ಈ ಪ್ರಕಾರ ರಾಯನು ಆ ದಿವಸ ಅರಮನೆಯನ್ನೆಲ್ಲಾ ನೋಡಿ ಸಂತೋಷ ಪಟ್ಟನು. ಅನಂತರ ನಾಲ್ಕಾರು ತಿಂಗಳಾದ ಮೇಲೆ ರಾಮಕೃಷ್ಣನು ಒಂದು ದಿವಸ ಸಂತೋಷವಾಗಿ ಕುಳಿತಿರುವ ರಾಯನ ಬಳಿಗೆ ಬಂದು ವಂದಿಸಿ ನಿಂತುಕೊಂಡು ಮಹಾ ಪ್ರಭೋ, ಅನೇಕವಾಗಿ ಭಾವ ಚಿತ್ರಗಳ ಲಕ್ಷಣವನ್ನು ಪರಿಶೋಧಿಸ ಬೇಕೆಂದು ಸನ್ನಿಧಾನದಲ್ಲಿ ಅಪ್ಪಣೆಯಾದ ಪ್ರಕಾರ ಚಿತ್ರ ಶಾಸ್ತ್ರವನ್ನೆಲ್ಲಾ ಓದಿದೆನು, ಇದು ಮಾ

ತ್ರವೇ ಅಲ್ಲದೆ, ಪೂರ್ವಕ್ಕೆ ಬಾಣಾಸುರನ ಮಗಳಾದ ಉಷಾ ಕನ್ನಿಕೆಗೆ ಚಿತ್ರರೇಖೆ ಎಂಬ ಸ್ನೇಹಿತಳು ಚಿತ್ರವನ್ನು ಬರದು ತೋರಿಸಿದ ಹಾಗೆ ಬಹಳ ಶ್ರಮ ಪಟ್ಟು ಬರೆಯ ಕಲಿತು ಇದ್ದೇನೆ, ಪರಾಂಬರಿಸ ಬೇಕೆಂದು ವಿನಯದಿಂದ ಬೇಡಿ ಕೊಂಡನು. ಅವನ ಮಾತು ನಿಜವೆಂದು ರಾಯನು ನಂಬಿ ಆ ಹೊಸ ಅರಮನೆಗೆ ಬರಿಸಿ ಇರುವ ಚಿತ್ರವೆಲ್ಲಾ ಮಸಿಕಿ ಹೋಗಿ ಹಳೇದಾಯಿತು, ಅದನ್ನೆಲ್ಲಾ ಬರಸಿ ಬಿಟ್ಟು ಹೊಸದಾಗಿ ಯೋಗ್ಯವಾದ ಚಿತ್ರಗಳನ್ನು ವಿಚಿತ್ರವಾಗಿ ಬರದು ತೋರಿಸೆಂದು ಅವನಿಗೆ ಅಪ್ಪಣೆ ಕೊಟ್ಟನು.

ಆಗ ರಾಮಕೃಷ್ಣನು ಇಷ್ಟೇ ಸಾಕೆಂದು ಆ ಭುವನೇಶ್ವರಿ ಎಂಬ ಹೊಸ ಅರಮನೆಗೆ ಹೋಗಿ ಮೊದಲಿದ್ದ ಚಿತ್ರವನ್ನೆಲ್ಲಾ ಒಂದೇ ದಿವಸದಲ್ಲಿ ಅಳಿಸಿ ಬಿಟ್ಟು, ಬೇಕಾದ ಬಣ್ಣದ ಸಾಮಾನುಗಳೆಲ್ಲಾ ಸಿದ್ಧ ಮಾಡಿ ಕೊಂಡು, ಹದಿನೈದು ದಿವಸದ ಪರಿಯಂತರವೂ ಒಬ್ಬನೇ ಒಳಗೆ ಸೇರಿಕೊಂಡು, ಹೊರಗಿನ ಜನಗಳು ಬಾರದ ಹಾಗೆ ಬಾಗಲು ಭದ್ರಪಡಿಸಿ ಬರಿಯುವದಕ್ಕೆ ಪ್ರಾರಂಭಿಸಿ, ಒಂದು ಕಡೆ ಉಗುರು, ಒಂದುಕಡೆ ಬೆರಳು ಹಾಗೆಯೇ ಹೆಜ್ಜೆಗಳು, ಗಿರಿಕೆ, ಮೇಗಾಲು, ಕೆಳಕಾಲು, ಮೊಣಕಾಲು, ತೊಡೆ, ನಡುವು, ಹೊಕ್ಕಳು, ಹೊಟ್ಟೆ, ಬರ್ರಿಗಳು, ಎದೆಕಟ್ಟು, ಕೊರಳು, ಹೆಗಲುಗಳು, ತೋಳುಗಳು, ಮೊಣಕೈ, ಮುಂಗೈ, ಹಿಂಗೈ, ಅಂಗೈ, ಕೈ ಬೆರಳು, ಕೈ ಉಗುರು, ಗಡ್ಡ, ಕೆನ್ನೆ, ತುಟಿ, ಹಲ್ಲು, ಮೀಶೆಗಳು, ಕೋರೆಗಳು, ಬಾಯಿ, ನಾಲಿಗೆ, ಮೂಗು, ಮೂಗಿನ ಸೊಳ್ಳೆ, ರೆಪ್ಪೆಗಳು, ಕಣ್ಣುಗಳು, ಹುಬ್ಬುಗಳು, ಕಿವಿಗಳು, ಕಪಾಳ, ಹಣೆ, ಮುಂಗುರುಳು, ಕೂದಲು,

ಜಡೆಗಂಟು, ತುರುಬು, ಈ ಮುಂತಾದ ಅವಯವಗಳು ಪೂರ್ಣ ವಾಗಿ ಪೂರ್ಣವಾಗಿ ಇರದೆ ಅಲ್ಲೊಂದು ಇಲ್ಲೊಂದು ಅರೆಗೆಲಸವಾಗಿ, ತಿರುಪತಿ ನಾಯಿಂದನು ತಲೆ ಬೋಳಿಸುವ ಹಾಗೆ, ಹುಚ್ಚು ಹುಚ್ಚಾಗಿ ಬರದು ತನ್ನ ಅಕಟ ವಿಕಟ ಚಿತ್ರದಿಂದ ಅರಮನೆಯನ್ನೆಲ್ಲಾ ತುಂಬಿಸಿ, ಇಪ್ಪತ್ತು ದಿವಸದ ಮೇಲೆ ರಾಯನ ಬಳಿಗೆ ಬಂದು ವಂದನೆ ಮಾಡಿ, ಬುದ್ಧಿ ಮಹಾ ಪ್ರಭೋ, ಅಪ್ಪಣೆ ಪ್ರಕಾರ ವಿಚಿತ್ರವಾದ ಭಾವ ಚಿತ್ರಗಳಿಂದ ತುಂಬಿದ ಭವನೇಶ್ವರಿ ಎಂಬ ಅರಮನೆಯು ಶೋಭಾಯಮಾನವಾಗಿ ಇದೆ, ಚಿತ್ತೈಸಿ ಪರಾಂಬರಿಸ ಬೇಕೆಂದನು.

ಆಗ ರಾಯನು ಪರಿವಾರ ಜನಸಹಿತವಾಗಿ ಸಂತೋಷದಿಂದ ಅರಮನೆಗೆ ಬಂದು, ಅಲ್ಲಿ ಬರದಿರುವ ಹುಚ್ಚು ಹುಚ್ಚಾದ ಅಕಟ ವಿಕಟದ ಚಿತ್ರವನ್ನು ನೋಡಿ, ಕೋಪದಿಂದ ಎಲಾ ನೀಚನೇ, ಅರಮನೆಯನ್ನೆಲ್ಲಾ ಕೆಡಿಸಿ ಬಿಟ್ಟೆಯಲ್ಲಾ, ಇಂಥಾ ಕುಲಗೇಡಿಯಾದ ನಿನ್ನನ್ನು ಏನು ಮಾಡಿದರೆ ದುಃಖ ತೀರುವದು ಎಂದು ತಗಲಿ ಕೊಂಡನು. ಅದಕ್ಕೆ ಭಯ ಪಡದೆ ವಿಕಟಕವಿಯು ಎದುರಾಗಿ ನಿಂತು ಕೈ ಮುಗಿದು ಮಹಾ ಪ್ರಭುವೇ, ನಾನು ಬರೆದಿರುವ ಚಿತ್ರಗಳ ಪೂರ್ಣ ಭಾವಗಳೆಲ್ಲಾ ಹಿಂದುಗಡೆಯಾಗಿರುವದು. ಆರು ತಿಂಗಳಿಗೆ ಮುಂಚೆ ಅರ್ಧ ಮುಖದ ಚಿತ್ರವನ್ನು ನೋಡಿ ನಾನು ಅರಿಕೆ ಮಾಡಿದ್ದಕ್ಕೆ ಅದು ಅತ್ತಕಡೆಯ ಭಾವವೆಂದು ಅಪ್ಪಣೆ ಕೊಟ್ಟದನ್ನು ಜ್ಞಾಪಕಕ್ಕೆ ತಂದು, ನನ್ನ ತಪ್ಪುಗಳನ್ನೆಲ್ಲಾ ಮನ್ನಿಸ ಬೇಕೆಂದನು. ಆಗ ರಾಯನು ನಕ್ಕು ಸುಮ್ಮನೆ ಆದನು. ಇದೇ ವಿಕಟಕವಿಗಳ ಲಕ್ಷಣವು.

---

## 60. RAMAKRISHNA HIDES HIS HEAD.

### ೬೦. ರಾಮಕೃಷ್ಣನು ತಲೆ ಮರಸಿಕೊಂಡದ್ದು.

ಅದೇ ರಾಮಕೃಷ್ಣ ಕವಿಯು ವಿನೋದಾರ್ಥವಾಗಿ ದಿನ ಒಂದಕ್ಕೆ ನೂರು ತಪ್ಪುಗಳು ಮಾಡಿದಾಗ್ಯೂ ಮನ್ನಿಸುವದಾಗಿ ಅವನಿಗೆ ರಾಯರು ಮಾತು ಕೊಟ್ಟಿದ್ದರು. ಆ ಧೈರ್ಯದಿಂದಲೇ ರಾಯರು ಸಹಿಸ ಕೂಡದ ತಪ್ಪುಗಳನ್ನು ಸಹ ಅವನು ಹಾಸ್ಯಗಾರನೆಂಬ ನೆವದಿಂದ ಭಯವಿಲ್ಲದೆ ಮಾಡುತ್ತಿರುವನು. ಹೀಗಿರುವ ರಾಮಕೃಷ್ಣ ಕವಿಯನ್ನು ಸ್ವಲ್ಪ ಭಯದಿಂದಿರುವ ಹಾಗೆ ಮಾಡ ಬೇಕೆಂದು ರಾಯರ ಮಂತ್ರಿ ಅಪ್ಪಾಜಿಯು ಆಲೋಚಿಸಿ, ರಾಮ ಕೃಷ್ಣನನ್ನು ತನ್ನ ಮನೆಗೆ ಅಂತರಂಗವಾಗಿ ಕರಿಸಿ, ಅಯ್ಯಾ ವಿದ್ವಾಂಸನೇ, ನೀನು ಮಹಾ ಸಮರ್ಥನು ಹೌದು, ಆದಾಗ್ಯೂ ಅಲಂಕಾರವಾಗಿಯೂ ಯೋಗ್ಯವಾಗಿಯೂ ಇದ್ದ ಭವನೇಶ್ವರಿ ಎಂಬ ಅರಮನೆಯ ಚಿತ್ರವನ್ನು ನೀನು ಕೆಡಿಸಿ ಬಿಟ್ಟು, ಯದ್ವಾ ತದ್ವಾ ಕೋತಿಗೀಟುಗಳು ಕೊಂಗರಿ ಗೀಟುಗಳು ಬರದಿಟ್ಟಿಯಲ್ಲಾ, ಅದರಿಂದ ರಾಯರು ನಿನ್ನ ಮೇಲೆ ಬಹಳ ಕೋಪವಾಗಿದ್ದಾರೆ, "ಅರಸನ ಚಿತ್ತವು ಮರದ ನೆರಳು" ಎಂಬುವ ಹಾಗೆ ಧೊರೆಗಳ ಚಿತ್ತವು ಒಂದು ಪ್ರಕಾರ ವಿರುವದಿಲ್ಲ, ಹ್ಯಾಗೆ ಹೋಗಿ ಹ್ಯಾಗೆ ಬರುವದೋ ತಿಳಿಯದು, ಆದಕಾರಣ ರಾಯರಿಗೆ ನಿನ್ನ ಮೇಲೆ ಹುಟ್ಟಿರುವ ಕೋಪ ಶಾಂತವಾಗಿ ರಾಮಕೃಷ್ಣನು ಎಲ್ಲೆಂದು ಪ್ರೀತಿಯಿಂದ ನಿನ್ನನ್ನು ಕರಿಸುವ ಪರಿಯಂತರಕ್ಕೂ, ನೀನು ರಾಯರ ದೃಷ್ಟಿಗೆ ಬೀಳದೆ ಅಯಿದಾರು ದಿವಸ ತಲೆಮರೆಯಾಗಿ ಇರು, ಎಂದು ಹೇಳಿದನು. ಆ ಮಾತನ್ನು ಕೇ

ಆ ರಾಮ ಕೃಷ್ಣನು, ಸ್ವಾಮಿಾ, ನಾನು ಅಂಥಾ ದೊಡ್ಡ ತಪ್ಪು ಏನೂ ಮಾಡಲಿಲ್ಲ, ಆದಾಗ್ಯೂ ತಮ್ಮ ಅಪ್ಪಣೇ ಪ್ರಕಾರ ನಡೆಯುಬೇಕಾದ್ದೇ ಯುಕ್ತವೆಂದು ಹೇಳಿ ತನ್ನ ಮನೆಗೆ ಬಂದು, ಆ ಮರುದಿವಸ ಒಂದು ಬಾನಿಗೆ ಎರಡು ತೂತು ಕೊರದು ಆ ರಂಧ್ರಗಳಿಂದ ಕಣ್ಣು ಕಾಣುವ ಹಾಗೆ ಮಾಡಿಕೊಂಡು, ಆ ಬಾನೆಯನ್ನು ತಲೇ ಮೇಲೆ ಕವಿಚಿಕೊಂಡು, ಮೈಗೆಲ್ಲಾ ಕಾಚಲು ಬಾಪೆ ತುಂಡುಗಳು ಸುತ್ತಿಕೊಂಡು ಬೀದಿ ಬೀದಿ ತಿರುಗಲಾರಂಭಿಸಿದನು. ಅವನು ರಾಮ ಕೃಷ್ಣನೆಂದು ಒಬ್ಬರಿಗೂ ತಿಳಿಯದೆ ಇತ್ತು. ಇದೇ ವೇಷದಿಂದ ಅವನು ಆ ದಿವಸ ದರಬಾರಿನ ಹೊತ್ತಿನಲ್ಲಿ ರಾಜ ಸಭೆಯ ಮುಂದೆ ಬಂದು ನಿಂತನು. ಆಗ ಇಂಥಾ ವಿಕಾರ ವೇಷದಿಂದ ಸ್ವಲ್ಪವಾದರೂ ಭಯ ಸಂಕೋಚಗಳಿಲ್ಲದೆ ಸಭೆಗೆದುರಾಗಿ ನಿಲ್ಲುವ ಧೈರ್ಯವು ರಾಮಕೃಷ್ಣನಿಗೆ ಹೊರ್ತು ಮತ್ತೊಬ್ಬರಿಗೂ ಇಲ್ಲವೆಂದೂಹಿಸಿ ರಾಯರು ನೀನ್ಯಾರು? ರಾಮಕೃಷ್ಣನೋ? ಎಂದು ವಿಚಾರಿಸಲು, ಅವನು ಮಹಾ ಪ್ರಭೋ, ಹೌದು, ಆಜ್ಞಾಧಾರಕನು ಸನ್ನಿಧಾನದಲ್ಲಿ ಹಾಜರಾಗಿದ್ದೇನೆಂದು ಘಟ್ಟಿಯಾಗಿ ಕೂಗಿ ಹೇಳಿದನು. ಅದಕ್ಕೆ ಮಹಾ ದಯಾಳುವಾದ ರಾಯರು ಯಾಕೆ ಹೀಗಿದ್ದೀ ಎಂದು ಕೇಳಲು, ತಲೆ ಮರೆಯಾಗಿರು ಎಂದು ಅಪ್ಪಾಜಿಯವರ ಅಪ್ಪಣೆ ಆಯಿತು, ನಾನು ತಲೆ ಮಾತ್ರವೇ ಅಲ್ಲದೆ ಮೈಯಲ್ಲಾ ಸಹಾ ಮರಿಸಿ ಕೊಂಡಿದ್ದೇನೆ, ಯಾವ ತಪ್ಪಿದ್ದರೂ ಮನ್ನಿಸಿ ಕಾಪಾಡ ಬೇಕೆಂತ ಬೇಡಿಕೊಳ್ಳುತ್ತೇನೆ, ಎಂದನು. ರಾಯರು ತಕ್ಷಣದಲ್ಲೇ ಆ ವಿಕಾರ ವೇಷವನ್ನು ತೆಗಿಸಿ ಬಹುಮಾನ ಮಾಡಿ, ಅಪ್ಪಾಜಿಯನ್ನು ನೋಡಿ ಹೀಗೆ ಯಾಕೆ ಹೇಳಿದಿ ಎಂದು ಕೇಳಿ

ದ್ದಕ್ಕೆ, ಆಪ್ಪಾಜಿಯು ನಾನು ಒಂದು ಹೇಳಿದರೆ ಎರಡು ಮಾಡಿ ದ್ದಾನೆ, ಸರ್ವಜ್ಞ ಚಿತ್ತವೆಂದು ರಾಯರನ್ನು ಸಮಾಧಾನ ಪಡಿಸಿ ದನು. ಎಲ್ಲರೂ ಸಂತೋಷ ಪಟ್ಟರು. ಹೀಂಗೆ ರಾಮಕೃಷ್ಣ ನು ಮಾಡಿದ ವಿನೋದಗಳು ಅನೇಕ ಉಂಟು.

---

## 61. RAMAKRISHNA TESTS THE KING'S MIND.

### ೬೧. ರಾಯರ ಚಿತ್ತದ ಪರಿಕ್ಷೆ.

ತೆನ್ನಾಲರಾಮಕೃಷ್ಣನು ಒಂದು ದಿವಸ ರಾಯರ ಸಭೆಯಲ್ಲಿ ಕುಳಿತು ಕೊಂಡಿದ್ದು ತನ್ನ ಮೇಲೆ ರಾಯರ ದೃಷ್ಟಿಯು ಪೂರ್ಣ ವಾಗಿ ಬಿದ್ದ ಸಮಯದಲ್ಲಿ ಹುಸ್ಸೆಂದು ನಿಟ್ಟುಸುರು ಬಿಟ್ಟು ಜೋ ಲು ಮುಖ ಬೀಳ ಮಾಡಿಕೊಂಡನು. ಹೀಗಿರುವ ರಾಮಕೃ ಷ್ಣನ ಮುಖ ಭಾವವನ್ನು ನೋಡಿ ರಾಯರು, ರಾಮಕೃಷ್ಣಾ, ಯಾತಕ್ಕೆ ಬಹಳ ವ್ಯಸನಾಕ್ರಾಂತನಾಗಿದ್ದೀಯೆ ? ಮನಸ್ಸಿನಲ್ಲಿ ಇರುವ ಕೊರತೆಯನ್ನು ತಿಳಿಸು, ನಿನ್ನ ಕೋರಿಕೆ ಕೈ ಗೂಡಿ ಬರುವ ಹಾಗೆ ಮಾಡುವೆವು, ಎಂದನು. ರಾಮಕೃಷ್ಣನು ಜಿ ಯ್ಯಾ, ನನ್ನ ಮನಸ್ಸಿನಲ್ಲಿರುವ ಕೊರತೆಯನ್ನು ಸಂನಿಧಾನದ ಲ್ಲಿ ಅರಿಕೆ ಮಾಡದೆ ಮತ್ಯಾರ ಸಂಗಡ ಹೇಳಲಿ, ಚಿತ್ತಕ್ಕೆ ತರ ಬೇಕು, ನಿನ್ನೇ ದಿವಸ ಹೊತ್ತು ಹೋಗದೆ ನನ್ನ ಜಾತಕದ ವಹಿಯನ್ನು ಓದಿ ನೋಡುತ್ತಾ ಇದ್ದೆನು, ಅದರಲ್ಲಿ ನನ್ನ ಆಯು ರ್ದಾಯಕ್ಕೆ ಸೂರ್ಯ ಚಂದ್ರ ಗ್ರಹಗಳು ಎರಡೂ ವಕ್ರಿಸಿ ಇವೆ. ಮತ್ತೂ ರಾಜ ದೃಷ್ಟಿಯು ಸಂಪೂರ್ಣವಾಗಿ ನನ್ನ ಮೇಲೆ ಎಂದು ಬೀಳುತ್ತದೋ ಆ ತರುವಾಯ ಬಹಳ ದಿವಸ ಬದುಕಲಾರೆನೆಂಬ

ಸೂಚನೆ ಉಂಟಾಗಿದೆ, ಈ ದಿವಸ ಆಳಿದ ಮಹಾ ಸ್ವಾಮಿಯವರ ಸಂಪೂರ್ಣ ದೃಷ್ಟಿ ನನ್ನ ಮೇಲೆ ಬಿದ್ದದ್ದ ನೋಡಲಾಗಿ ಜಾತಕದಲ್ಲಿ ಬರದಿರುವ ಫಲವು ತಾರ್ಕಣೆಗೆ ಬಂತು "ಜಾತಸ್ಯ ಮರಣಂಧೃವಂ" ಅಂದರೆ ಹುಟ್ಟಿದವನಿಗೆ ಸಾವು ನಿಶ್ಚಯವೇ ಸರಿ, ಪ್ರಾಣಿಗಳಿಗೆಲ್ಲಾ ಸ್ವಭಾವ ಸಿದ್ಧವಾಗಿ ಉಂಟಾದ ಮರಣಕ್ಕೆ ನಾನು ಅಂಜುವದಿಲ್ಲ, ಆದರೆ ನನ್ನ ತರುವಾಯ ನನ್ನ ಕುಟುಂಬವನ್ನು ನನ್ನ ಹಾಗೆ ಯಾರು ಸಂರಕ್ಷಣೆ ಮಾಡ್ಯಾರು? ನನ್ನ ಮನೆ ಹ್ಯಾಗೆ ಉದ್ಧಾರವಾಘೀತು? ಎಂಬ ಯೋಚನೆ ಹಿಡಿದದೆ, ಎಂದು ಸುಳ್ಳು ಸುಳ್ಳಾಗಿ ಕಣ್ಣುಗಳಲ್ಲಿ ನೀರು ಬಿಟ್ಟನು. ಆಗ ರಾಯನು ರಾಮಕೃಷ್ಣಾ, ಯಾಕೆ ವ್ಯಸನ ಪಡುತ್ತೀ? ಅಂಥಾ ಆಪತ್ತು ನಿನಗೆ ಬರಲೇ ಬೇಡ, ಮನುಷ್ಯನಾದ್ದರಿಂದ ಒಂದು ವೇಳೆ ಬಂದಾಗ್ಯೂ ನಿನ್ನ ಕುಟುಂಬವನ್ನು ನೀನಿದ್ದದ್ದಕಿಂತಲೂ ಹೆಚ್ಚಾಗಿ ಪರಾಂಬರಿಸಿ ಕಾಪಾಡುವೆನು, ಇದಕ್ಕಾಗಿ ನೀನು ಯೋಚನೆ ಮಾಡ ಬೇಡನೆಂದು ಭರವಸ ಹೇಳಿದನು. ರಾಮಕೃಷ್ಣನು ನನ್ನ ವ್ಯಸನ ಹೋಯಿತೆಂದು ಎದ್ದು ಕೈ ಮುಗಿದನು. ತರುವಾಯ ಮರುದಿವಸದಿಂದ ರಾಮಕೃಷ್ಣನ ಶರೀರಕ್ಕೆ ಸ್ವಸ್ಥವಿಲ್ಲವೆಂಬದಾಗಿ ರಾಯರ ಮಟ್ಟಿಗೂ ವರ್ತಮಾನ ಮುಟ್ಟುವ ಹಾಗೆ ಭೇಷಜ ಮಾಡಿ, ಸಭೆಗೆ ಹೋಗದೆ ಮನೆಯೊಳಗೆ ಇದ್ದು ಕೊಂಡು, ತನ್ನ ದ್ರವ್ಯವನ್ನೆಲ್ಲಾ ಬೇರೊಂದು ಕಡೆ ಭದ್ರ ಪಡಿಸಿ ಪುಸ್ತಕ ಮುಂತಾದ ಕೆಲವು ಸಾಮಾನುಗಳನ್ನು ದೊಡ್ಡ ದೊಡ್ಡ ಪೆಟ್ಟಿಗೆಗಳಿಗೆ ತುಂಬಿ ಬೀಗ ಮುದ್ರೆ ಮಾಡಿ, ಅವುಗಳಿಗೆ ದ್ರವ್ಯದ ಪೆಟ್ಟಿಗೆಗಳೆಂದು ಮೇಲು ವಿಲಾಸಗಳು ಬರೆದಿಟ್ಟು, ತಾನು ಒಂದು ಪೆಟ್ಟಿಗೆಯೊಳಗೆ ಉಸರಾಡುವದಕ್ಕೆ ಆಯಕಟ್ಟು ಮಾಡಿ ಸೇರಿ

ಕೊಂಡು ಅದಕ್ಕೆ ರತ್ನದ ಪೆಟ್ಟಿಗೆ ಎಂದು ವಿಳಾಸ ಹಾಕಿ ಹೇಳಿ ತಾನು ತೀರಿ ಹೋದನೆಂಬ ಪುಕಾರು ಹುಟ್ಟಿಸಿದನು. ಆಗ ರಾಯನು ವ್ಯಸನಪಟ್ಟು ಸಾಯಂಕಾಲವಾಗುತ್ತಲೇ "ಅರಸನಿಗೆ ಹಣದಾಶೆ" ಎಂಬ ಸಾಮತಿಗೆ ಸರಿಯಾಗಿ ರಾಮಕೃಷ್ಣನ ಮನೆಯಲ್ಲಿ ಬಹಳ ಹಣವಿರುವದೆಂದೆಣಿಸಿ, ಕಲಾಸೀ ಕಾವಲಾಟಿ ಆಳುಗಳನ್ನು ಅಲ್ಲಿಗೆ ರಹಸ್ಯವಾಗಿ ಕಳುಹಿಸಿ, ಆ ಮೇಲು ವಿಲಾಸದ ಪೆಟ್ಟಿಗೆಗಳನ್ನೆಲ್ಲಾ ಅರಮನೆಗೆ ತರಿಸಿದನು. ಅದರೊಳಗೆ ರಾಮಕೃಷ್ಣನು ಸೇರಿಕೊಂಡು ಇದ್ದ ಪೆಟ್ಟಿಗೆ ಬಹಳ ಭಾರವಾಗಿದ್ದದ್ದರಿಂದ ಇದರಲ್ಲಿ ಬಹಳ ರತ್ನಗಳಿರುವದೆಂದು ಸಾಲಿನಲ್ಲಿ ಮೊದಲನೇ ಪೆಟ್ಟಿಗೆಯಾಗಿ ರಾಯನ ಮುಂದುಗಡೇಲಿ ಇಟ್ಟರು.

ಆಗ ರಾಯನು ಜಾಗ್ರತೆಯಾಗಿ ಆ ಪೆಟ್ಟಿಗೆಯ ಮುಚ್ಚಳವನ್ನು ತೆಗಿಸಲು, ಜಯಾ ವಿಜಯೀ ಭವ ಎಂದು ಎದ್ದು ನಿಂತುಕೊಂಡ ರಾಮಕೃಷ್ಣನನ್ನು ನೋಡಿ, ರಾಯನು ಕಡುನಾಚಿಕೆಯಿಂದ ರಾಮಕೃಷ್ಣಾ, ನೀನು ಸತ್ತು ಹೋದಿ ಎಂದು ವರ್ತಮಾನ ಕೇಳಿದೆವಲ್ಲಾ, ಎಂದು ಉಪಚಾರ ಹೇಳಿದನು. ರಾಮಕೃಷ್ಣನು ಪ್ರಭುವೇ ನಿಮ್ಮನ್ನು ನಂಬಿ ಸಾಯಬಹುದೋ? "ಬುಡ್ಡಿಯನ್ನು ನಂಬಿ ಹೊಳೆಯಲ್ಲಿ ಬೀಳಬಹುದೋ" ನಿಮ್ಮಂಥಾ ಪ್ರಭುವೇನೋ ನನ್ನ ಕುಟುಂಬವನ್ನು ಸಂರಕ್ಷಣೆ ಮಾಡ ತಕ್ಕವರು, ಹಾಗಿದ್ದರೆ "ಧರ್ಮೋವನಂತರ್ಗತಃ" ಅಂದರೆ ಧರ್ಮವು ಅಡವಿ ಪಾಲಾಯಿತೆಂಬ ನೀತಿ ವಾಕ್ಯವು ಯಾಕೆ ಹುಟ್ಟುವದು? ಆ ವಾಕ್ಯವೇ ನಿಜವು, ನಿಮ್ಮ ಮಾತೇ ಸುಳ್ಳು, ನನ್ನ ಮಾತು ಸುಳ್ಳೋ ನಿಜವೋ ಅಪ್ಪಣೆಯಾಗ ಬೇಕೆಂದನು. ಆಗ ಅರಸನಿಗೆ ಬಹಳ ನಾಚಿಕೆ ಉಂಟಾಗಿ ಆತನು ಅಪಕೀರ್ತಿ

ಬಂತೆಂಬ ಭಯದಿಂದ ರಾಮಕೃಷ್ಣನಿಗೆ ಬಹುಮಾನ ಮಾಡಿ ಸಾಮಾನು ಸಹ ಮನೆಗೆ ಕಳುಹಿಸಿ ಕೊಟ್ಟನು. ಹೀಗೆ ಹಣ ಸಂಪಾದಿಸುವ ವಿಷಯದಲ್ಲಿ ಅಧರ್ಮಕ್ಕೆ ಬೀಳುವ ಅರಸುಗಳಿಗೆ ಅಪಕೀರ್ತಿ ತಪ್ಪುವದಿಲ್ಲ.

---

## 62. THE MAN WHO LOST HIS NOSE.

### ೬೨. ಮೂಗು ಹರಕನನ್ನು ಕುರಿತದ್ದು.

ಒಂದಾನೊಂದು ಕಾಲದಲ್ಲಿ ಮುಕ್ಕಡಿ ತಿಮ್ಮನೆಂಬ ಒಬ್ಬ ಮೂಗು ಹರಕನಿದ್ದನು. ಅವನು ಯೌವನದಲ್ಲಿ ದೂರ ದೇಶ ಸಂಚಾರ ಮಾಡುತ್ತಾ ಇರುವಾಗ, ಎಲ್ಲೋ ಏನೋ ಕೆಟ್ಟ ಕೆಲಸ ಮಾಡಿದ್ದರಿಂದ ಯಾರೋ ಹಿಡಿದು ಮೂಗು ಹತ್ತ ಕೊಯಿದು ಹಾಕಿ ಬಿಟ್ಟರು. ಆಗ ಅವನು ಇನ್ನು ಮೇಲೆ ನಾನೆಲ್ಲಿ ಹೋದರೂ ಮಾನಕ್ಕೆ ಕಡಿಮೆಯಾಗುವದೆಂದು ತಾನಿರುವದಕ್ಕೆ ತಕ್ಕ ಊರನ್ನು ಹುಡಿಕಿ ಈ ಮೂಗಿದ್ಯಾವನ ಪುರಕ್ಕೆ ಬಂದು ಸೇರಿದನು. ಆ ಊರಲ್ಲಿ ಇರುವ ಜನಗಳು ಓದು ಬರಹಾ ತಿಳಿಯದ ಮೂರ್ಖರಾಗಿದ್ದರು. ಅಂಥಾ ಊರಿನಲ್ಲಿ ಇವನು ಬಂದು ಸೇರಲು, ಅವರು ಇವನ ಹರದ ಮುಕ್ಕಡಿ ಮೂಗನ್ನು ನೋಡಿ, ಮೂಗು ಹರಕ ಮುಕ್ಕಡಿತಿಮ್ಮನೆಂದು ಹೆಸರಿಟ್ಟು ಕರೆಯುವದಲ್ಲದೆ ಬಹಳವಾಗಿ ಅಪಹಾಸ್ಯದ ಮಾತುಗಳು ಆಡಸಾಗಿದರು.

ಆಗ ಅವನು "ರಾಮೇಶ್ವರಕ್ಕೆ ಹೋದರೂ ಶನೇಶ್ವರ ಬಿಡದು" ಎಂಬ ಗಾದೆಗೆ ಸರಿಯಾಗಿ ನಾನೀ ಹಳ್ಳಿಗಾಡಿನಲ್ಲಿ ಬಂದು ಸೇ

ರಿದಾಗ್ಯೂ ನನಗೆ ಮೂಗು ಹರಕ ಮುಕ್ಕಡಿತಿಮ್ಮನೆಂಬ ಹೆಸರು ತಪ್ಪದೆ ಹೋಯಿತಲ್ಲಾ, ಈ ಹೆಸರು ಈ ಊರಿನಲ್ಲಿ ತಪ್ಪಿ ಹೋಗುವ ಹಾಗೆ ಏನಾದರು ಒಂದು ಹುನ್ನರಾ ಹುಡಕ ಬೇಕೆಂದು ಯೋಚಿಸಿ ಹೊತ್ತು ಹುಟ್ಟುವಾಗ್ಯೆ ಎದ್ದು ನಡುಬೀದಿಯಲ್ಲಿ ಬಂದು ನಿಂತುಕೊಂಡು, ತಲೇ ಎತ್ತಿ ಆಕಾಶವನ್ನು ನೋಡುತ್ತಾ, ಓ ಲೋಕ ಕರ್ತನೇ, ದೇವರೇ, ಬಹು ದಿವಸದಿಂದ ಈ ಪ್ರಪಂಚದ ಮಾಯೆಯಲ್ಲಿ ಬಿದ್ದು ಮೇಲಕ್ಕೆ ಏಳಲಾರದೆ ಒದ್ದಾಡುವ ನನ್ನನ್ನು ಉದ್ಧಾರ ಮಾಡು, ನಿನ್ನ ಸೇವೆಯನ್ನು ಮಾಡಿ ಮೆಚ್ಚಿಸುವದಕ್ಕೆ ಈ ಅಲ್ಪ ಮನುಷ್ಯನಾದ ನಾನು ಶಕ್ತನಲ್ಲ. ಸರ್ವ ಶಕ್ತನಾದ ನೀನೇ ನನ್ನನ್ನು ಕನಿಕರಿಸಿ ಕಾಪಾಡ ಬೇಕೆಂದು ಮೈ ನಡುಗುತ್ತಾ ಆನಂದ ಬಾಷ್ಪ ಬಿಡುತ್ತಾ ಅಂದರೆ ಕಣ್ಣಲ್ಲಿ ನೀರು ಸುರಿಸುತ್ತಾ ಡಗ್ಗುತ್ತಿಗೆಯಿಂದ ದಪ್ಪವಾದ ಗಂಟ್ಲನಲ್ಲಿ ಗದ್ಗದ ಸ್ವರವನ್ನು ಹೊರಡಿಸುತ್ತಾ, ಅಳುಕು ಬೆಳಕುಗಳನ್ನು ತೋರಿಸಿ, ತಾನು ಮಾಡುವ ಸ್ತೋತ್ರಕ್ಕೆ ದೇವರು ಪ್ರತ್ಯಕ್ಷವಾದ ಹಾಗೆ ನಿನ್ನ ಪಾದಕ್ಕೆ ಶರಣು ಶರಣು ಎಂದು ಅಡ್ಡ ಬೀಳುತ್ತಾ, ಎದ್ದು ನಿಂತು, ಸುತ್ತಲಿರುವ ಜನಗಳನ್ನು ನೋಡಿ, ದೇವರನ್ನು ನೋಡಿರಿ, ಕೊಂಡಾಡಿರಿ, ಸ್ತೋತ್ರ ಮಾಡಿರಿ, ಆಡಿ ಪಾಡಿ ಬೇಕಾದ ವರಗಳನ್ನು ಬೇಡಿರಿ, ವ್ಯರ್ಥವಾಗಿ ಕಾಲ ಕಳಿಯ ಬೇಡಿರಿ, ಎಂದು ಪ್ರತಿನಿತ್ಯವೂ ಅವರನ್ನು ಭ್ರಮೆ ಪಡಿಸುತ್ತಾ, ಮಾಯವಾದಿತನವನ್ನು ತೋರಿಸುತ್ತಾ ಬರಲು; ಕೂಡಿ ಬಂದ ಮೂರ್ಖರೆಲ್ಲರೂ ಇವನ ಮೋಸಕ್ಕೆ ಒಳಗಾಗಿ, ಓ ಮಹಾತ್ಮನೇ, ನಮ್ಮಲ್ಲಿ ಕರುಣವಿಟ್ಟು ದೇವರು ನಮಗೆ ಕಾಣಿಸುವ ಹಾಗೆ ಮಾಡಬೇಕೆಂದು ಬಹುತರವಾಗಿ ಬೇಡಿಕೊಂಡರು. ಆಗ

ಅವನು ಆ ಜನಗಳನ್ನು ನೋಡಿ ನೀವು ನನ್ನ ಹಾಗೆ ಮೂಗು ಹರಕರಾದ ಕಾಲಕ್ಕೆ ದೇವರನ್ನು ನೋಡುವಿರೆಂದನು. ಆ ಮಾತಿನ ಮೇರಿಗೆ ಕೆಲವರು ಮೂಗುಗಳ ಹತ್ತ ಕೊಯಿ ಕೊಂಡು ಅವನ ಹಾಗೆ ಆಕಾಶಕ್ಕೆ ತಲೆ ಎತ್ತಿ ನೋಡಿದಾಗ ದೇವರೂ ಕಾಣಿಸಲಿಲ್ಲ, ದಿಂಡರೂ ಕಾಣಿಸಲಿಲ್ಲ. ಆಗ ಅವರು ಮೋಸ ಹೋದೆವೆಂದು ಬಾಯಿಂದ ಹೇಳದೆ, ತಮ್ಮನ್ನು ನೋಡಿ ನಗುವ ಮಿಕ್ಕ ಜನಗಳನ್ನೆಲ್ಲಾ ಮೋಸ ಮಾಡುವದಕ್ಕಾಗಿ ತಮಗೆ ದೇವರು ಕಾಣಬರುತ್ತಾನೆಂದು ಸುಳ್ಳು ಮಾತುಗಳನ್ನು ನಿಜವಾಗಿ ತೋರುವ ಹಾಗೆ ಹೇಳುತ್ತಾ ಬರಲು, ಹತ್ತು ಮಂದಿ ಹೇಳುವ ಮಾತು ನಿಜವೇಸರಿ ಎಂದು ಊರಿನವರೆಲ್ಲರೂ ಮೂಗು ಕೊಯಿಕೊಂಡು ಮೂಗು ಹರಕರಾದರು. ಆಗ ಆ ಊರಿಗೆ ಮೂಗುದೇವನ ಹಳ್ಳಿ ಎಂಬ ಹೆಸರು ನಿಶ್ಚಯವಾಯಿತು. ಎಲ್ಲರೂ ಮುಂಕು ದೇವರ ಪೂಜಾರಿಗಳಾದರು. ಹೀಗೆ "ತಾನು ಕೆಡುವ ಕೋತಿಯು ವನವೆಲ್ಲಾ ಕೆಡಿಸಿತು" ಎಂಬ ಗಾದೆಯು ಹಾಗೆ, ದುರ್ಮಾರ್ಗರು ಜನಗಳನ್ನು ಕೆಡಿಸುವರು.

---

## 63. THE KING'S SON, THE MUSICIAN, AND THE CALABASHES.

### ೬೩. ಸೋರೇಕಾಯಿಯೂ ಅರಸನ ಮಗನೂ.

ಅವಂತಿ ಎಂಬ ಪಟ್ಟಣದಲ್ಲಿ ಅವಿದ್ಯನೆಂಬ ಒಬ್ಬ ಅರಸು ಮಗನಿದ್ದನು. ಅವನಿಗೆ ಬಾಲ್ಯದಲ್ಲಿ ತಂದೆಯೂ ಉಪಾಧ್ಯನೂ ಅನೇಕ ಪ್ರಕಾರವಾಗಿ ಅನೇಕ ವುಪಾಯಗಳಿಂದ ವಿದ್ಯೆ ಕಲಿಸಿದ

ರು. ಆದಾಗ್ಯೂ ಅವನಿಗೆ ವಿದ್ಯೆ ಬಾರದೆ ರಾಜನೀತಿ ಲಕ್ಷಣಗಳು ಏನೂ ತಿಳಿಯದೆ, ಅವನು ಬೇಟೆ, ಕೋಳಿ ಹುಂಜಿನ ಜಗಳ, ಟಗರಿನ ಕಾಳಗ, ಇಂಥಾ ಅಯೋಗ್ಯ ಕೆಲಸಗಳಲ್ಲಿ ರುಚಿಯುಳ್ಳವನಾಗಿ ಅವಿದ್ಯನೆಂಬ ಹೆಸರು ಪಡೆದನು. ಹೀಗಿರುವಾಗ ಕೆಲವು ವರ್ಷಗಳ ಮೇಲೆ ತಂದೆ ತೀರಿ ಹೋಗಲು, ಮಗನಿಗೆ ಪಟ್ಟವಾಯಿತು. ಅವಿವೇಕಿಗೆ ಪ್ರಭುತ್ವ ಉಂಟಾದ ಮೇಲೆ ಅವನ ರಾಜ್ಯಭಾರದ ಕ್ರಮವೆಲ್ಲಾ ಅಕ್ರಮವಾಯಿತು. ಈ ಅರಸನ ಬಳಿಗೆ ವೀಣೇ ವಿದ್ವಾಂಸರು ಬಂದು ಬಹುಮಾನ ಪಡೆಯ ಬೇಕೆಂಬ ಅಪೇಕ್ಷೆಯಿಂದ ತಮ್ಮ ವೀಣೆಗಳನ್ನು ಬಾರಿಸಿ ರಾಗ ರಚನೆಯಿಂದ ರಾಯನನ್ನು ಮೆಚ್ಚಿಸಿದರು. ಆಗ ಅವರ ವೀಣೆಗಳಲ್ಲಿ ತುಂಬುರು ವೀಣೆಗಳಿಗೆ ಒಂದೊಂದು ಸೋರೆ ಬುರುಡೆಗಳೂ, ರುದ್ರವೀಣೆಗಳಿಗೆ ಮೂರು ಮೂರು ಸೋರೆ ಬುರಡೆಗಳೂ ಇರುವದನ್ನು ನೋಡಿ, ಅವಿದ್ಯರಾಯನು ಆ ವೀಣಾ ವಾದ್ಯದ ಸ್ವಾರಸ್ಯವನ್ನು ಸ್ವಲ್ಪವಾದರೂ ತಿಳುಕೊಳ್ಳದೆ ಬುರುಡೆ ಒಂದಕ್ಕೆ ಒಂದೊಂದು ವರಹಾ ಪ್ರಕಾರ ಲೆಖ್ಖಾ ಮಾಡಿ ಬಹುಮಾನ ಕೊಟ್ಟು ಹೋಗಿರೆಂದನು.

ಈ ಮೇರೆಗೆ ಅಲ್ಪ ಬಹುಮಾನವನ್ನು ಪಡೆದು ಅಸಂತುಷ್ಟಿಯಿಂದ ತಮ್ಮ ತಮ್ಮ ಊರುಗಳಿಗೆ ಹೊರಟ ವಿದ್ವಾಂಸರೊಳಗೆ ಚಂಡಾಮರ್ಕನೆಂಬ ವೈಣಿಕನು ಕೆಲವು ತಿಂಗಳ ಮೇಲೆ ಪುನಃ ರಾಯನ ಬಳಿಗೆ ಬಂದು, ಅರಮನೆಯ ಹೊರಬಾಗಲಲ್ಲಿ ಉದ್ದವಾದ ಕಂಭಕ್ಕೆ ನೂರಾರು ಸೋರೆ ಬುರಡೆಗಳನ್ನು ತರಿಸಿ ಕಟ್ಟಿ ಸ್ತಂಭ ವೀಣೆಗಾರನು ಬಂದಿದ್ದಾನೆ ಎಂಬ ವರ್ತಮಾನವನ್ನು ಅರಸಿಗೆ ತಿಳಿಸಿದನು. ಬಳಕ್ಕೆ ಬರಹೇಳೆಂದು ಮೂಢ ರಾಯ

ನು ಹೇಳಿ ಕಳುಹಿಸಲು, ಚಂಡಾಮರ್ಕನು ಬಳಿಕ್ಕೆ ನಾನು ಬಂದರೂ ಸ್ತಂಭ ವೀಣೆಯು ಬರಲಾರದು ಎಂದು ತಿಳಿಸಿದನು. ಆ ಮಾತಿಗೆ ಮೂಢ ರಾಯನು ಸೋರೆ ಬುರಡೆಯು ಲೆಕ್ಕದ ಪ್ರಕಾರ ವರಹಾಗಳು ಕೊಟ್ಟು ಕಳುಹಿಸಿ ಬಿಡೆಂದು ಆಜ್ಞಾಪಿಸಿದನು. ವೈಣಿಕನಿಗೆ ನೂರಾರು ವರಹಾ ಪ್ರಯೋಜನವಾಯಿತು. ರಾಯನಿಗೆ ಅವಿವೇಕಿ ಎಂಬ ಹೆಸರೇ ಸ್ಥಿರವಾಯಿತು. ಆದ್ದರಿಂದ ವಿದ್ಯೆ ಇಲ್ಲದವನಿಗೆ ವಿತರಣೆ ಹುಟ್ಟುವದು ಪ್ರಯಾಸವು.

---

## 64. TRUE AND FALSE FRIENDS.

### ೬೪. ಸ್ನೇಹ ಮಾಡಿ ಬಿಡುವಿಕೆ.

ಕಲ್ಪಕವೆಂಬ ಪಟ್ಟಣದಲ್ಲಿ ಕಲ್ಯಾಣಶೀಲನೆಂಬ ಅರಸು ತಾನು ಧರ್ಮ ಗುಣ ವೃಕ್ತನಾಗಿದ್ದುಕೊಂಡು, ತನ್ನ ರಾಜ್ಯದಲ್ಲಿ ಅಧರ್ಮ ಅನ್ಯಾಯಗಳು ನಡೆಯದ ಹಾಗೆ ಹಿಂದಿನ ಚಕ್ರವರ್ತಿಗಳೋಪಾದಿಯಲ್ಲಿ ರಾಜ್ಯವನ್ನಾಳುತ್ತಾ ಯಿದ್ದನು. ಹೀಗಿರುವಾಗ ಮಿತ್ರ್ಯೋಹಿ ಅತ್ರ್ಯೋಹಿ ಎಂಬ ಯೋಗ ಸಿದ್ಧರಿಬ್ಬರು ಅರಸನ ಕಾಣುವ ಬಗ್ಯೆ ರಾಜ ಸಭೆಗೆ ಬಂದು ಆಶೀರ್ವದಿಸಿ, ಅರಸನ ಅನುಮತಿಯಿಂದ ತಕ್ಕ ಸ್ಥಳಗಳಲ್ಲಿ ಕುಳಿತುಕೊಳ್ಳಲು, ಲೋಕಾಭಿರಾಮವಾಗಿ ಧರ್ಮಪರವಾದ ಪ್ರಸ್ತಾಪಗಳು ನಡೆಯುವಲ್ಲಿ ಅರಸನು ಅವರಿಬ್ಬರನ್ನು ನೋಡಿ ಎಲೈ ಸರ್ವಜ್ಞರೇ, ಸ್ನೇಹಿಸ ತಕ್ಕವರು ಇಂಥಾವರು, ಸ್ನೇಹಿಸ ಕೂಡದವರು ಇಂಥಾವರು, ಎಂಬದನ್ನು ವಿವರಿಸಿ ಹೇಳಬೇಕೆಂದನು. ಅದಕ್ಕೆ ಮಿತ್ರ್ಯೋಹ

ವು. ಆದಾಗ್ಯೂ ಅವನಿಗೆ ವಿದ್ಯೆ ಬಾರದೆ ರಾಜನೀತಿ ಲಕ್ಷಣಗಳು ಏನೂ ತಿಳಿಯದೆ, ಅವನು ಬೇಟೆ, ಕೋಳಿ ಹುಂಜಿನ ಜಗಳ, ಟಗರಿನ ಕಾಳಗ, ಇಂಥಾ ಅಯೋಗ್ಯ ಕೆಲಸಗಳಲ್ಲಿ ರುಚಿಯುಳ್ಳವನಾಗಿ ಅವಿದ್ಯನೆಂಬ ಹೆಸರು ಪಡೆದನು. ಹೀಗಿರುವಾಗ ಕೆಲವು ವರ್ಷಗಳ ಮೇಲೆ ತಂದೆ ತೀರಿ ಹೋಗಲು, ಮಗನಿಗೆ ಪಟ್ಟವಾಯಿತು. ಅವಿವೇಕಿಗೆ ಪ್ರಭುತ್ವ ಉಂಟಾದ ಮೇಲೆ ಅವನ ರಾಜ್ಯಭಾರದ ಕ್ರಮವೆಲ್ಲಾ ಅಕ್ರಮವಾಯಿತು. ಈ ಅರಸನ ಬಳಿಗೆ ವೀಣೇ ವಿದ್ವಾಂಸರು ಬಂದು ಬಹುಮಾನ ಪಡೆಯ ಬೇಕೆಂಬ ಅಪೇಕ್ಷೆಯಿಂದ ತಮ್ಮ ವೀಣೆಗಳನ್ನು ಬಾರಿಸಿ ರಾಗ ರಚನೆಯಿಂದ ರಾಯನನ್ನು ಮೆಚ್ಚಿಸಿದರು. ಆಗ ಅವರ ವೀಣೆಗಳಲ್ಲಿ ತುಂಬುರು ವೀಣೆಗಳಿಗೆ ಒಂದೊಂದು ಸೋರೆ ಬುರುಡೆಗಳೂ, ರುದ್ರವೀಣೆಗಳಿಗೆ ಮೂರು ಮೂರು ಸೋರೆ ಬುರಡೆಗಳೂ ಇರುವದನ್ನು ನೋಡಿ, ಅವಿದ್ಯರಾಯನು ಆ ವೀಣಾ ವಾದ್ಯದ ಸ್ವಾರಸ್ಯವನ್ನು ಸ್ವಲ್ಪವಾದರೂ ತಿಳುಕೊಳ್ಳದೆ ಬುರುಡೆ ಒಂದಕ್ಕೆ ಒಂದೊಂದು ವರಹಾ ಪ್ರಕಾರ ಲೆಖ್ಖಾ ಮಾಡಿ ಬಹುಮಾನ ಕೊಟ್ಟು ಹೋಗಿರೆಂದನು.

ಈ ಮೇರಿಗೆ ಅಲ್ಪ ಬಹುಮಾನವನ್ನು ಪಡೆದು ಅಸಂತುಷ್ಟಿಯಿಂದ ತಮ್ಮ ತಮ್ಮ ಊರುಗಳಿಗೆ ಹೊರಟ ವಿದ್ವಾಂಸರೊಳಗೆ ಚಂಡಾಮರ್ಕನೆಂಬ ವೈಣಿಕನು ಕೆಲವು ತಿಂಗಳ ಮೇಲೆ ಪುನಃ ರಾಯನ ಬಳಿಗೆ ಬಂದು, ಅರಮನೆಯ ಹೊರಬಾಗಲಲ್ಲಿ ಉದ್ದವಾದ ಕಂಭಕ್ಕೆ ನೂರಾರು ಸೋರೆ ಬುರಡೆಗಳನ್ನು ತರಿಸಿ ಕಟ್ಟಿ ಸ್ತಂಭ ವೀಣೆಗಾರನು ಬಂದಿದ್ದಾನೆ ಎಂಬ ವರ್ತಮಾನವನ್ನು ಅರಸಿಗೆ ತಿಳಿಸಿದನು. ಒಳಕ್ಕೆ ಬರಹೇಳೆಂದು ಮೂಢ ರಾಯ

ನು ಹೇಳಿ ಕಳುಹಿಸಲು, ಚಂಡಾಮರ್ಕನು ಬಳಿಕ್ಕೆ ನಾನು ಬಂದರೂ ಸ್ತಂಭ ವೀಣೆಯು ಬರಲಾರದು ಎಂದು ತಿಳಿಸಿದನು. ಆ ಮಾತಿಗೆ ಮೂಢ ರಾಯನು ಸೋರೆ ಬುರುಡೆಯ ಲೆಕ್ಕದ ಪ್ರಕಾರ ವರಹಾಗಳು ಕೊಟ್ಟು ಕಳುಹಿಸಿ ಬಿಡೆಂದು ಆಜ್ಞಾಪಿಸಿದನು. ವೈಣಿಕನಿಗೆ ನೂರಾರು ವರಹಾ ಪ್ರಯೋಜನವಾಯಿತು. ರಾಯನಿಗೆ ಅವಿವೇಕಿ ಎಂಬ ಹೆಸರೇ ಸ್ಥಿರವಾಯಿತು. ಆದ್ದರಿಂದ ವಿದ್ಯೆ ಇಲ್ಲದವನಿಗೆ ವಿತರಣೆ ಮುಟ್ಟುವದು ಪ್ರಯಾಸವು.

---

## 64. TRUE AND FALSE FRIENDS.

### ೬೪. ಸ್ನೇಹ ಮಾಡಿ ಬಿಡುವಿಕೆ.

ಕಲ್ಪಕವೆಂಬ ಪಟ್ಟಣದಲ್ಲಿ ಕಲ್ಯಾಣಶೀಲನೆಂಬ ಅರಸು ತಾನು ಧರ್ಮ ಗುಣ ಯುಕ್ತನಾಗಿದ್ದುಕೊಂಡು, ತನ್ನ ರಾಜ್ಯದಲ್ಲಿ ಅಧರ್ಮ ಅನ್ಯಾಯಗಳು ನಡೆಯದ ಹಾಗೆ ಹಿಂದಿನ ಚಕ್ರವರ್ತಿಗಳೋಪಾದಿಯಲ್ಲಿ ರಾಜ್ಯವನ್ನಾಳುತ್ತಾ ಯಿದ್ದನು. ಹೀಗಿರುವಾಗ ಮಿತ್ರದ್ರೋಹಿ ಆತ್ಮದ್ರೋಹಿ ಎಂಬ ಯೋಗ ಸಿದ್ಧರಿಬ್ಬರು ಅರಸನ ಕಾಣುವ ಬಗ್ಗೆ ರಾಜ ಸಭೆಗೆ ಬಂದು ಆಶೀರ್ವದಿಸಿ, ಅರಸನ ಅನುಮತಿಯಿಂದ ತಕ್ಕ ಸ್ಥಳಗಳಲ್ಲಿ ಕುಳಿತುಕೊಳ್ಳಲು, ಲೋಕಾಭಿರಾಮವಾಗಿ ಧರ್ಮಪರವಾದ ಪ್ರಸ್ತಾಪಗಳು ನಡೆಯುವಲ್ಲಿ ಅರಸನು ಅವರಿಬ್ಬರನ್ನು ನೋಡಿ ಎಲೈ ಸರ್ವಜ್ಞರೇ, ಸ್ನೇಹಿಸ ತಕ್ಕವರು ಇಂಥಾವರು, ಸ್ನೇಹಿಸ ಕೂಡದವರು ಇಂಥಾವರು, ಎಂಬುದನ್ನು ವಿವರಿಸಿ ಹೇಳಬೇಕೆಂದನು. ಅದಕ್ಕೆ ಮಿತ್ರದ್ರೋಹ

ನಿಂತೆಂದನು. ಆದೂರು ಎಂಬ ಗ್ರಾಮದಲ್ಲಿ ಅಂಕನೆಂಬ ಶೂದ್ರ
ನ ಬಳೀಲಿ ಒಂದು ನಾಯಿ ಇತ್ತು. ಅದು ಅವನ್ನ ಯಡೆಬಿಡ
ದೆ ಸ್ನೇಹಿಸಿ ಯಿರುವದು. ಒಂದು ದಿವಸ ಅಗಾಧವಾದ ಮಡುವಿ
ನಲ್ಲಿ ಮೈ ತೊಳೆಯುವದಕ್ಕೆ ಆ ಶೂದ್ರನು ಯಿಳಿಯ ಹೋಗ
ಲಾಗಿ ಆ ನಾಯಿ ಅದರಲ್ಲಿರುವ ಮೊಸಳೆಯ ಸೋವೆಯನ್ನು ತಿ
ಳಿದು, ಆತನನ್ನು ನೀರಿನಲ್ಲಿಳಿಯಬೇಡವೆಂಬುವ ಹಾಗೆ ಸನ್ನೆ
ಮಾಡಿತು. ಅದನ್ನು ಅರಿಯದೆ, ಅವನು ನಾಯನ್ನು ಹಿಂದಕ್ಕೆ
ತಳ್ಳಿ ಮುಂದಾಗಿ ನಡೆದನು. ಆಗ ನಾಯಿ ಅವನ ಉಟ್ಟ ಬಟ್ಟೆ
ಯನ್ನು ಹಿಡಿದು ಹಿಂದಕ್ಕೆ ಎಳೆಯಲು, ಆಗಲೂ ಅವನು ಅದ
ನ್ನು ತಳ್ಳಿ ನೀರೊಳಗೆ ಇಳಿಯ ಹೋದನು. ತನ್ನ ಸಾಕಿದ
ಶೂದ್ರನು ಮೊಸಳೆಯ ಬಾಯಿಗೆ ಎರೆಯಾಗುತ್ತಾನಲ್ಲಾ ಎಂಬ
ಚಿಂತೆಯಿಂದ, ಆ ನಾಯಿ ಅವನಿಗಿಂತ ಮುಂದಾಗಿ ಮಡುವಿನ
ಲ್ಲಿ ಹೊಕ್ಕು ಮೊಸಳೆಯ ಬಾಯಿಗೆ ತುತ್ತಾಗಿ ಸತ್ತು ಹೋಯಿ
ತು. ಆಗ ಶೂದ್ರನು ಭಯದಿಂದ ಹಿಂತಿರಿಗಿ ತನ್ನ ಪ್ರಾಣವನ್ನು
ಕಾಪಾಡುವದಕ್ಕಾಗಿ ಸತ್ತ ನಾಯಿಗೋಸ್ಕರ ದುಃಖ ಪಟ್ಟನು.
ಇಂಥಾ ಗುಣವುಳ್ಳವನನ್ನು ಸ್ನೆಹಿಸಬೇಕೆಂತ ಮತ್ಸ್ಯಹನು
ಹೇಳಿದನು. ಅತ್ಸ್ಯಹನು ಕೇಳೈಯ್ಯಾ ಅರಸೇ, ಮದೋತ್ಕಟ
ವೆಂಬ ಆನೆಗೆ ಮಂದಪಾಲನೆಂಬ ಮಾವಟಿಗನಿದ್ದನು, ಅವನು
ಆ ಆನೆಗೆ ನಿತ್ಯವೂ ಅರಮನೆಯಿಂದ ಕೊಡುವ ರಾತೀಬು ಕಬ
ಳಗಳಲ್ಲಿ ಒಂದು ಕಬಳವನ್ನು ಮಿಗಿಸಿಕೊಂಡು ಮಿಕ್ಕ ಕಬಳಗ
ಳನ್ನೇ ಕೊಡುತ್ತಾ ಯಿದ್ದನು, ಸಾಕಿದವನೆಂತ ಅವನ ಮೇಲೆ ಅ
ಭಿಮಾನಿಸದೆ ಹಗೆ ಯಿಟ್ಟು ಆ ಆನೆ ಒಂದಾನೊಂದು ಸಮಯದ
ಲ್ಲಿ ಅವನನ್ನು ಸೊಂಡ್ಲದಲ್ಲಿ ಹಿಡಿದು ಸುತ್ತಿ ನೆಲಕ್ಕೆ ಅಪ್ಪಳಿಸಿ

ಕೊಂದು ಹಾಕಿತು, ಇಂಥಾ ಗುಣ ವುಳ್ಳವನನ್ನು ಸ್ನೇಹಿಸ ಬಾ
ರದು, ಆದಕಾರಣ ದೊಡ್ಡಸ್ತಿಕೆ ಚಿಕ್ಕತನ ಇವು ಎರಡಕ್ಕೂ
ಮುಖ್ಯವಾದ್ದು ಗುಣವೇ ಹೊರ್ತು ಆಕಾರವಲ್ಲ, ಹೀಗೆ ಗುಣ
ವರಿತು ಸ್ನೇಹಿಸ ಬೇಕೆಂದು ನುಡಿದನು. ಅದಕ್ಕೆ ರಾಯನು ಸಂ
ತೋಷ ಪಟ್ಟು ಆ ಇಬ್ಬರನ್ನೂ ಸನ್ಮಾನಿಸಿ ಕಳುಹಿಸಿದನು.

---

## 65. THE VALUE OF MERIT.

### ೬೫. ಯೋಗ್ಯತೆ.

ಪಾಂಡ್ಯದೇಶಕ್ಕೆ ಅಧಿಪತಿಯಾದ ಪ್ರಜ್ಞಾನಿಧಿ ಎಂಬ ರಾಯ
ನಿಗೆ ಲೀಲಾವತಿ ಎಂಬ ರಾಣಿ ಇರುವಳು. ಆ ರಾಣಿಯು ಒಂ
ದಾನೊಂದು ದಿವಸ ರಾಯನು ಸಂತೋಷ ಚಿತ್ತನಾಗಿ ಅಧಿಕಾರ
ಪದ್ಧತಿಗಳನ್ನು ತನ್ನೊಡನೆ ಹೇಳುತ್ತಾ ಇರುವ ಸಮಯದಲ್ಲಿ
ಆತನನ್ನು ಕುರಿತು, ಪ್ರಿಯನೇ, ನನ್ನ ಬಿನ್ನಹವನ್ನು ಚಿತ್ತಕ್ಕೆ
ತಂದು ಸದುತ್ತರವನ್ನು ಹೇಳಬೇಕು, ಅದೇನಂದರೆ ಮಂತ್ರಿ ಸಾ
ಮಾಜೀಕರು ಮೊದಲಾದವರು ಯಾವ ಕೆಲಸವೂ ಮಾಡದೆ ಅಲಂ
ಕಾರ ವಿದ್ಯಾರ್ಥಿಗಳ ಹಾಗೆ ಸುಮ್ಮನೆ ಸಭೆಯಲ್ಲಿ ಕುಳಿತುಕೊಂ
ಡು ಇರುತ್ತಾರೆ, ಅವರಿಗೆಲ್ಲಾ ಐನೂರು ಆರುನೂರು ಸಾವಿರ ವ
ರಹಾಗಳ ಪರಿಯಂತರವೂ ಹೆಚ್ಚು ಸಂಬಳ ನಡಿಯುತ್ತದೆ. ಕ
ಷ್ಟದ ನಡುವು ಬಿಚ್ಚದ ಹಾಗೆ ಕೂತುಕೊಳ್ಳುವದಕ್ಕೆ ಸಾವಕಾಶವಿ
ಲ್ಲದೆ, ಎಲ್ಲಿ ಬೇಕಾದರೆ ಅಲ್ಲಿಗೆ ಓಡಿ ಹೋಗುತ್ತಾ ಬರುತ್ತಾ ಕಷ್ಟ

ಪಟ್ಟು ಚಾಕರಿ ಮಾಡುವಂಥಾ ದಲಾಯಿತರು ಮುಂತಾದ ಆಳುಗಳಿಗೆಲ್ಲಾ ಅರಕ್ಕೆ ಹೆಚ್ಚಿಲ್ಲ, ಮೂರಕ್ಕೆ ಕಡಮೆ ಇಲ್ಲ "ಅರಮನೆಗೆ ಹತ್ತು ಮನೆಗೆ ಏಳು" ಮತ್ತು "ಮುಂಡೆಗೆ ಸಂಬಳ ಮುವ್ವತ್ತೇ ಹಣ" ಎಂಬ ಗಾದೆಗಳಿಗೆ ಸರಿಯಾಗಿ ಸ್ವಲ್ಪ ಸ್ವಲ್ಪ ಸಂಬಳಗಳೇ ನಡಿಯುತ್ತವೆ, ಇಂಥಾ ಪದ್ಧತಿ ಬಹಳ ಅನ್ಯಾಯವಲ್ಲವೆ? ಹೇಳಿರಿ ಅಂದಳು. ಸಂಗಡಲೇ ರಾಯನು ಎರಡು ದಂತದ ಭರಣಿಗಳನ್ನು ಉಗ್ರಾಣದಿಂದ ತರಿಸಿ, ಆ ಎರಡರಲ್ಲೂ ಸ್ವಲ್ಪ ಸ್ವಲ್ಪ ಬೂದಿ ಬಂದೆರಡು ಕೂದಲುಗಳು ಹಾಕಿ ಮುಚ್ಚಳವನ್ನು ಭದ್ರವಾಗಿ ಮುಚ್ಚಿ ಮೊಹರು ಮಾಡಿ ಸಾವಿರ ವರಹಾ ಸಂಬಳ ಉಂಟಾದ ವಿವೇಕಶೀಲನೆಂಬ ಮಂತ್ರಿಯ ಮಗನಾದ ವಿವೇಕನಿಧಿ ಎಂಬವನನ್ನು ಕರಿಸಿ, ಅರಸ್ತಿ ನೋಡುತ್ತಿರುವಾಗ ಒಂದು ಭರಣಿಯನ್ನು ಅವನ ಕೈಲಿ ಕೊಟ್ಟು, ಎಲೈ ಮಂತ್ರಿ ಕುಮಾರನೇ, ಈ ಭರಣಿಯನ್ನು ಕೇರಳರಾಯನಾದ ಕೃತವೀರ್ಯನಿಗೆ ತಲುಪಿಸಿ ಬಾ ಎಂದು ಕಳುಹಿಸಿದನು. ಮತ್ತೊಂದು ಭರಣಿಯನ್ನು ಆರು ವರಹಾದ ಸಂಬಳಗಾರನಾದ ದಫೇದಾರನ ಕೈಗೆ ಕೊಟ್ಟು ಇದನ್ನು ಚೋಳರಾಯನಾದ ಸುತೀಕ್ಷ್ಣನಿಗೆ ಮುಟ್ಟಿಸಿ ಬಾ ಎಂದು ಕಳುಹಿಸಿದನು.

ಮಂತ್ರಿ ಕುಮಾರನು ಕೇರಳ ದೇಶಾಧಿಪತಿಯ ಬಳಿಗೆ ಬಂದು ವಿನಯದಿಂದ ಕೈ ಮುಗಿದು ರಾಯನ ಕುಶಲ ವಾರ್ತೆಯನ್ನು ತಿಳಿಸಿ ಕೇರಳ ರಾಯನು ಸಂತೋಷಚಿತ್ತನಾಗಿರುವ ಸಮಯವನ್ನರಿತು ಆ ದಂತದ ಭರಣಿಯನ್ನು ಕೈ ವಸ್ತ್ರದ ಮಡುಪಿನ ಮೇಲೆ ಇಟ್ಟುಕೊಂಡು, ತನ್ನ ಎರಡು ಕೈಗಳನ್ನು ಚಾಚಿ ಕಾಣಿಕೆಯ ಹಾಗೆ ರಾಯನ ಮುಂದೆ ಯಿಟ್ಟನು. ರಾಯನು ಅದ

ನ್ನು ಕೈಗೆ ತೆಗೆದುಕೊಂಡು ಮುಚ್ಚಳವನ್ನು ತೆರದು ನೋಡಿ, ಇದೇನು? "ತೋಟ ಶೃಂಗಾರ ಒಳಗೆ ಗೋಣಿಸೊಪ್ಪು" ಎಂಬ ಗಾದೆಗೆ ಸರಿಯಾಗಿದೆ, ಎನ್ನಲು, ಆಗ ತಾನೇ ಆ ಭರಣಿಯು ಲ್ಲಿದ್ದದ್ದನ್ನು ನೋಡಿದ ಮಂತ್ರಿ ಕುಮಾರನು ಪ್ರಭುವೇ, ಲಾಲಿಸಬೇಕು, ಇವು ಬಹಳ ಶ್ರೇಷ್ಠವಾದ್ದು, ವಿಂಧ್ಯ ಪರ್ವತವಾಸಿಗಳಾದ ಮಂತ್ರಸಿದ್ಧರು ಇಬ್ಬರು ಬಂದು, ತಮ್ಮ ಅನುಗ್ರಹಕ್ಕೆ ಪಾತ್ರನಾದ ನಮ್ಮ ರಾಯನ ಕಡೆಯಿಂದ ಮಾಡಿಸಿದ ಯಜ್ಞದಲ್ಲಿ ಪ್ರತ್ಯಕ್ಷವಾದ ಭೂತರಾಜನಿಂದ ಕೊಡೋಣಾದ ಈ ಭಸ್ಮವೂ ಜಡೆಯು ಕೂಡಲೂ ಅರಸರುಗಳಿಗೆ ಜಯಕಾರಣವಾದ್ದು, ಪ್ರಾಜ್ಞಯೋಗ್ಯವಾದ್ದು, ಅದ್ದರಿಂದ ಪರಮ ಮಿತ್ರರಾದ ನಿಮಗೆ ಸ್ವಲ್ಪ ಕಳುಹಿಸಿ ಕೊಟ್ಟು ಇದ್ದಾರೆ, ಎಂದು ಹೇಳಿದನು. ಆ ಮಾತನ್ನು ಕೇಳಿ ರಾಯನು ಅದನ್ನು ಸಂತೋಷದಿಂದ ಅಂಗೀಕರಿಸಿ ಮಂತ್ರಿ ಕುಮಾರನಿಗೆ ಬಹುಮಾನವನ್ನು ಕೊಟ್ಟನು. ಅದನ್ನು ಪಡಕೊಂಡು ಮಂತ್ರಿಕುಮಾರನು ಬಂದು ರಾಣಿಯು ಕೇಳುವ ಹಾಗೆ ಪಾಂಡ್ಯರಾಯನಲ್ಲಿ ನಡದ ಸಂಗತಿಯನ್ನೆಲ್ಲಾ ತಿಳಿಸಿದನು.

ಎರಡನೆ ಯವನಾದ ಆಳುಮಾತ್ರದವನು ಚೋಳರಾಯನ ಬಳಿಗೆ ಹೋಗಿ ಅಲ್ಲಿದ್ದ ಸಮುಖದ ಉಳಿಗದವರ ಕೈಗೆ ಭರಣಿಯನ್ನು ಕೊಟ್ಟು ದೂರದಲ್ಲಿ ಕೈಮುಗಿದು ನಿಂತಿರುವಾಗ, ಚೋಳನು ಆ ಭರಣಿಯ ಮುಚ್ಚಳವನ್ನು ತೆರದು ನೋಡಿ, ಕೋಪಗೊಂಡು ಪಾಂಡ್ಯನಿಗೆ ಕಣ್ಣು ಮುಚ್ಚಿ ಹೋಯಿತೋ ಏನೋ? ಕೇಶ ಭಸ್ಮಗಳನ್ನು ಕಳುಹಿಸಿದ್ದಾನೆ, ಇದನ್ನು ತಂದವನ್ಯಾರೆಂದು ಗರ್ಜಿಸಿದನು. ಅಷ್ಟುಮಾತ್ರದಲ್ಲೇ ಎದುರಾಗಿ ನಿಲ್ಲಿಸಲ್ಪಟ್ಟ ಉಳಿಗದ

ವನ ಮುಖಕ್ಕೆ ರಾಯನು ಆ ಬೂದಿಯನ್ನು ಬಳಿಸಿ, ಅವನ ಕಿವಿಗೆ ಆ ಕೂದಲುಗಳನ್ನು ಸುತ್ತಿಸಿ, ಕೆನ್ನೆಗೆ ಪೆಟ್ಟು ಹೊಡಿಸಿ, ನಿಮ್ಮ ರಾಯನ ಬಳಿಗೆ ಹೋಗೆಂದು ತಳ್ಳಿಸಿ ಬಿಟ್ಟನು. ಅವನು ಅಳುತ್ತಾ ಬಂದು ತನ್ನ ಅವಸ್ಥೆಯನ್ನು ಹೇಳುವದನ್ನೆಲ್ಲಾ ಕೇಳುತ್ತಾ ಕಿಟಕಿಯಲ್ಲಿ ಕುಳಿತಿರುವ ರಾಣಿಯನ್ನು ನೋಡಿ, ನಿನ್ನ ಸಂದೇಹ ಹೋಯಿತೋ ಇನ್ನು ಇದೆಯೋ? ಎಂದು ರಾಯನು ಕೇಳಿದ್ದಕ್ಕೆ, ಆಕೆ ನಾಚಿಕೆ ಪಟ್ಟು ಕ್ಷಮಿಸ ಬೇಕೆಂದು ಹೇಳಿದಳು. ಆಗ ರಾಯನು ಮಂತ್ರಿ ಕುಮಾರನಿಗೆ ಮಂತ್ರಿತ್ವವನ್ನು ಕೊಟ್ಟು ಪೆಟ್ಟು ತಿಂದು ಬಂದ ಆಳಿಗೆ ತಕ್ಕ ಇನಾಮು ಕೊಟ್ಟು ಸಮದಾಯಿಸಿ ಕಳುಹಿಸಿದನು. ಈ ಮೇರಿಗೆ ರಾಜದ್ವಾರದಲ್ಲಿ ಅವರವರ ಯೋಗ್ಯತಾನುಸಾರವಾಗಿ ಜೀವನಗಳುಂಟಾಗಿರುವದು.

---

## 66. THE KING AND THE STORY TELLERS.

### ೬೬. ಕಥಾಸಾಗರನು.

ದುರ್ಗವೆಂಬ ಪಟ್ಟಣದಲ್ಲಿ ಲುಬ್ಧಕನೆಂಬ ಅರಸು ಮಹಾ ಲೋಭ ಗುಣದಿಂದ ರಾಜ್ಯವಾಳುತ್ತಿರುವಾಗ, ದೇಶಾಂತ್ರಗಳಿಂದ ಯಾಚಕಸ್ತರಾಗಿ ಬರುವ ವಿದ್ವಾಂಸರು ಅವನ ಗುಣವನ್ನು ಅರಿಯದೆ ರಾಜಾಶ್ರಯದಿಂದ ನಮಗೆ ವಿಶೇಷವಾಗಿ ಪ್ರಯೋಜನ ಉಂಟಾದೀತೆಂಬ ಆಶೆಯಿಂದ ರಾಯನ ಸಮುಖವನ್ನು ಕಾದು ಕಟ್ಟಿ, ಸಮಯವರಿತು ಕಂಡು ತಮ್ಮ ವೃತ್ತಾಂತವನ್ನೆಲ್ಲಾ ವಿನಯವಾಗಿ ತಿಳಿಸಿ ನಿತ್ಯವೂ ಅರಸನ ಬಳಿಗೆ ಬರುತ್ತಾ ಇರುವರು.

ಅವರನ್ನು ಒಬ್ಬೊಬ್ಬರಾಗಿ ರಾಯನು ಸಮಿಾಪಕ್ಕೆ ಕರಿಯುತ್ತಾ ಏನಾದರೂ ಕಥೆ ಹೇಳಿ ಎಂದು ಕೇಳುವನು. ಅವನವನು ತನಗೆ ತೋಚಿದ ಒಂದೆರಡು ಕಥೆಗಳನ್ನು ಹೇಳಿದ್ದ ಕೇಳಿ, ಇನ್ನೊಂದು ಹೇಳು, ಮತ್ತೊಂದು ಹೇಳು, ಎಂದು ಅವನಿಗೆ ಬರುವ ಕಥೆಗಳನ್ನೆಲ್ಲಾ ಕೇಳಿದ ತರುವಾಯ ಇಷ್ಟೇನೋ? ಇನ್ನೇನೂ ಬಾರದೋ? ಇಂಥಾವನಿಂದ ನಮಗೇನು ಪ್ರಯೋಜನ? ಬಂದ ದಾರೀ ಹಿಡುಕೊಂಡು ಹೋಗು ಎಂದು ಒಂದು ರೂಪಾಯಾದರೂ ಕೊಡದೆ ಕಳುಹಿಸುವನು. ಬಂದ ವಿದ್ವಾಂಸರೆಲ್ಲರೂ ಇದೇ ಮೋರಿಗೆ ಪ್ರಯೋಜನವಿಲ್ಲದೆ, ಬರಿಕೈಗಳಿಂದ ಹೋಗುವದು ಮಾತ್ರವೇ ಅಲ್ಲದೆ, ಏನೂ ತಿಳಿಯದ ಮೂಢರೆನಿಸಿಕೊಂಡು ಛೀ ಇವನು ಮಹಾ ಲುಬ್ಧನು, ಎಂದು ಬೈಕೊಂಡು ಹೋಗುತ್ತಿರುವರು. ಅದರಿಂದಲೇ ಲುಬ್ಧಕನೆಂಬ ಹೆಸರು ಇವನಿಗುಂಟಾಯಿತು. ಹೀಗಿರುವಲ್ಲಿ ಸಪ್ತಗೋದಾವರಿ ತೀರವಾಸಿಯಾದ ಪ್ರಚಂಡ ಪಂಡಿತನೆಂಬ ಹೆಸರುಳ್ಳ ಒಬ್ಬ ವಿದ್ವಾಂಸನು, ಈ ವರ್ತಮಾನವನ್ನು ಕೇಳಿ, ಈ ಲೋಭಿರಾಯನಿಂದ ಅನೇಕ ಬಹುಮಾನಗಳನ್ನು ಸಂಪಾದಿಸಿಕೊಂಡು ಬರುವದಲ್ಲದೆ, ವಿದ್ವಜ್ಜನಗಳಿಗೆ ಅವಮಾನ ಮಾಡುವ ಇವನ ದುರ್ಗುಣವನ್ನು ಹೋಗಲಾಡಿಸುವೆನೆಂದು ಪ್ರತಿಜ್ಞೆ ಮಾಡಿಕೊಂಡು ತನ್ನ ಸ್ಥಳದಿಂದ ಹೊರಟು, ಈ ಪಟ್ಟಣಕ್ಕೆ ಬಂದು ತಕ್ಕ ಸಮಯವರಿತು ರಾಯನನ್ನು ಕಂಡು ಆಶೀರ್ವದಿಸಿ, ವಿದ್ವಾಂಸರು ಕುಳಿತುಕೊಳ್ಳುವ ಸ್ಥಳದಲ್ಲಿ ರಾಜಾನುಮತಿಯಿಂದ ಕೂತುಕೊಂಡನು. ಆಗ ರಾಯನು ಈ ಬ್ರಾಹ್ಮಣನನ್ನು ನೋಡಿ ನಿಮ್ಮದು ಯಾವ ದೇಶ? ವಾಸಸ್ಥಳವ್ಯಾವದು? ನಿಮ್ಮ ನಾಮಧೇಯವೇನು? ಎಂ

ದು ಕೇಳಲು, ಆತನು ಪ್ರಭುವೇ, ಸಪ್ತಗೋದಾವರೀ ತೀರದಲ್ಲಿ ಚಾತುರ್ಯ ಸಮುದ್ರವೆಂಬ ಅಗ್ರಹಾರದಲ್ಲಿ ವಾಸವಾಗಿರುವ ನನ್ನನ್ನು ವಾಗ್ಝರಿಯುಳ್ಳ ಕಥಾಸಾಗರನೆಂತ ಜನಗಳು ಕರೆಯುವರು, ಕಥೆಗಳನ್ನು ಕೇಳುವ ವಿಷಯದಲ್ಲಿ ಅತ್ಯಂತ ಕುತೂಹಲ ಉಳ್ಳ ತಮ್ಮನ್ನು ಸಂತೋಷ ಪಡಿಸಿ ಸಂತುಷ್ಟಿ ಹೊಂದುವದಕ್ಕೆ ಬಂದಿದ್ದೇನೆ, ಸ್ವಸ್ತ್ಯಸ್ತು ಅಂದನು. ಆಗ ರಾಯನು, ಆ ಬ್ರಾಹ್ಮಣನ ತೇಜಸ್ಸನ್ನು ನೋಡಿ, ಅಯ್ಯಾ, ನಿನಗುಂಟಾದ ಹೆಸರಿಗೆ ತಕ್ಕ ಕಥೆಯನ್ನು ಹೇಳಿದರೆ ಕೇಳುತ್ತೇನೆಂದನು. ಅದಕ್ಕಾ ಬ್ರಾಹ್ಮಣನು ಬಳ್ಳೇದು, ಹೇಳುತ್ತೇನೆಂತ ಇಂತೆಂದನು. ಪ್ರಭುವೇ, ಪೂರ್ವಕಾಲದಲ್ಲಿ ಸೂರ್ಯ ಮಂಡಲಕ್ಕೆ ಮರೆಯಾಗುವಷ್ಟು ಉನ್ನತವಾಗಿ ಬೆಳೆದು ಅಂದರೆ ಅರವತ್ತು ಗಾವದ ಉದ್ದ ಮೂವತ್ತು ಗಾವದ ಅಗಲ ಹತ್ತು ಗಾವದ ಉನ್ನತ ವುಳ್ಳ ವಿಂಧ್ಯ ಪರ್ವತದ ಮಧ್ಯ ಪ್ರದೇಶದಲ್ಲಿ ಬಂದು ಮಹಾ ಸರೋವರ ಉಂಟು. ಅದು ಉತ್ತರ ದಕ್ಷಿಣ ಎಂಟು ಸಾವಿರ ಗಜ, ಪೂರ್ವ ಪಶ್ಚಿಮ ಎಂಟು ಸಾವಿರ ಗಜ, ಹೀಗೆ ಚಚ್ಚೌಕವಾಗಿ ಯಿರುವದು. ಅದರಲ್ಲಿ ಕಮಲ ಕಲ್ಹಾರ ಕುಮುದ ನೀಲೋತ್ಪಲ ಮುಂತಾದ ಅನೇಕ ಪುಷ್ಪ ವಿಶೇಷಗಳು ರಮ್ಯವಾಗಿರುವದು.

ಅಂಥಾ ಸರೋವರದ ನಿರ್ಮಲವಾದ ಉದಕದಲ್ಲಿ ಸಂಚಾರ ಮಾಡುವದಕ್ಕೂ, ಆ ದಿವ್ಯವಾದ ಕಮಲಗಳ ನಾಳಗಳನ್ನು ಭಕ್ಷಿಸುವದಕ್ಕೂ ಸತ್ಯಲೋಕದ ಮಾನಸ ಸರಸ್ಸಿನಿಂದ ಕೋಟಾನ ಕೋಟಿ ಹಂಸ ಪಕ್ಷಿಗಳು ಬರುತ್ತಾ ಇರುವವು. ಹೀಗಿರುವಲ್ಲಿ ಬಂದಾನೊಂದು ದಿವಸ ದೊಡ್ಡ ಘಾಳಿ ಮಳೆಯು ಪೆಟ್ಟನ್ನು ತಪ್ಪಿ

ಸಿಕೊಳ್ಳುವ ನಿಮಿತ್ತ ಆ ಸರೋವರದ ಬಳಿಯಲ್ಲಿರುವ ದೊಡ್ಡ ಗುಹೆಯನ್ನು ಈ ಹಂಸಗಳು ಪ್ರವೇಶಿಸಿ, ಘಾಳಿ ಮಳೆ ನಿಂತ ಕೂಡ್ಲೇ ಯಥಾಸ್ಥಾನಕ್ಕೆ ಹೋಗತಕ್ಕ ಬಗ್ಗೆ ಆ ಗುಹೆಯ ಇಕ್ಕಟ್ಟಿನ ಬಾಗಿಲಿನಿಂದ ಬಂದು ಹಂಸವು ಹೊರಟಿತು ಎಂದು ಸುಮ್ಮನಾದನು. ಆಗ ರಾಯನು ಮತ್ತೇನೆಂದನು, ಬ್ರಾಹ್ಮಣನು ಮತ್ತೊಂದು ಹೊರಟಿತೆಂದನು. ಈ ಪ್ರಕಾರ ಮತ್ತೇನು ಮತ್ತೇನೆಂದು ಆ ಬುದ್ಧರಾಯನು ಕೇಳುವದಕ್ಕೆಲ್ಲಾ ಮತ್ತೊಂದು ಹೊರಟಿತು ಮತ್ತೊಂದು ಹೊರಟಿತು ಎಂದು ಬ್ರಾಹ್ಮಣನು ಹೇಳಿದನು. ಅವನ ಚಾತುರ್ಯವನ್ನು ನೋಡಿ ರಾಯನು ನಾಚಿಕೆ ಪಟ್ಟು, ಕಥಾಸಾಗರನಿಗೆ ಅನೇಕ ಬಹುಮಾನಗಳನ್ನು ಕೊಟ್ಟು ಕಳುಹಿಸಿ, ಅದು ಮೊದಲುಗೊಂಡು ಬಂದ ವಿದ್ವಾಂಸರಿಗೆ ಮರ್ಯಾದೆ ಮಾಡುತ್ತಾ ಬಂದನು. ಈ ಪ್ರಕಾರ ಪಂಡಿತರ ಬೋಧನೆಯಿಂದಲೇ ಮೂರ್ಖರಿಗೆ ವಿವೇಕ ಉಂಟಾಗಬೇಕು.

---

## 67. THE KING AND THE WISE VIZIER.

### ೬೭. ಮಂತ್ರಿತ್ವ.

ಅವಂತಿ ದೇಶಾಧಿಪತಿಯಾದ ಅತಿ ತೀವ್ರನೆಂಬ ಅರಸು, ತನ್ನ ರಾಜ್ಯದ ಪ್ರಜೆಗಳ ಬಾಳಿಕೆ ಬಡತನ ಮೊದಲಾದ್ದನ್ನೂ ವಿಚಾರಣೆ ಮಾಡದೆ, ಹೊಲದ ಮೇಲೆ ಮಾತ್ರ ಆಶೆ ಉಳ್ಳವನಾಗಿ, ರೈತರು ಮಾಡುವ ಭೂಮಿಗೆಲ್ಲಾ ಬೆಳೆದ ಸಂವತ್ಸರದ ತೆರಿಗೆಯ ಹಾಗೆಯೇ, ಬೆಳೆಯದ ಸಂವತ್ಸರಕ್ಕೂ ಕಂದಾಯವನ್ನು ಹೊತ

ದು ತೆಗದುಕೊಳ್ಳುವದಲ್ಲದೆ, ಬೆಳೆದ ಹೊಲಗಳ ದವಸಗಳಲ್ಲಿ ಸಹ ಅರಮನೆಗೆ ವಾರಾ ತೆಗದುಕೊಳ್ಳುವನು. ಇದೂ ಅಲ್ಲದೆ ವೃತ್ತ ಭೂಮಿಗೆ ಬಿತ್ತದೆ ಯಿದ್ದಾಗ್ಯೂ ಕಂದಾಯ ಮಾತ್ರ ತಪ್ಪದು. ಕಾಲಾವದಿಯಲ್ಲಿ ಒಂದು ವರಹಾಕ್ಕೆ ಸಾಗುವಳಿ ಮಾಡಿದ ಭೂಮಿಯನ್ನು ರೈತರು ಕಷ್ಟಪಟ್ಟು ಬೆಳೀ ಮಾಡಿದ ಬಳಿಕ ರೈತನ ಮೇಲೆ, ಇಲ್ಲ ಸಲ್ಲದ ಲೆಕ್ಕಗಳ ಹೊರಿಸಿ, ಒಂದು ವರಹಾಕ್ಕೆ ಮೂರು ವರಹಾ ದಂಡಾ ತೆಗದುಕೊಳ್ಳುವನು. ಮತ್ತು ಕೈ ತಪ್ಪು, ಬಾಯಿ ತಪ್ಪು ಗಂಡ ಹೆಂಡರ ವ್ಯಾಜ್ಯ, ಅಣ್ಣ ತಮ್ಮಂದಿರ ವಿವಾದ, ತಾಯಿ ಮಕ್ಕಳ ಜಗಳ, ಕೊಟ್ಟುಕೊಂಡವರ ವಾಗ್ವಾದ, ನೆಂಟರಿಷ್ಟರ ಹೋರು, ಮುಂತಾದ್ದೇನಾದರೂ ಉಂಟೆಂದು ವರ್ತಮಾನ ಕೇಳಿದ ಮಾತ್ರದಿಂದಲೇ, ಅರಸನು ಅವರನ್ನು ಹಿಡಿತರಿಸಿ ಹೊಡಿಸಿ ಬಡಿಸಿ ಅಪರಾಧಗಳ ಹೊರಿಸಿ ಮಿತಿಮೀರಿದ ದಂಡಗಳು ತೆರಿಸುವನು. ಸುಂಕದ ಅವಾಂತ್ರವಂತೂ ಹೇಳಲೇ ಕೆಲಸವಿಲ್ಲ, ಕುಡಿಯಲಿಕ್ಕೆ ನೀರು ಕೆರೆಯಿಂದ ತಂದರೆ ಬಿಂದಿಗೆ ನೀರಿಗೆ ಒಂದು ಕಾಸು ಪ್ರಕಾರ ಅನ್ಯಾಯವಾಗಿ ತನ್ನ ಶೀಮೆಯನ್ನು ತಾನೇ ದೋಚಿಕೊಳ್ಳುತ್ತಾ ಯಿರುವನು. ಇಂಥಾ ದಂಡ ದ್ರೋಹಗಳ ತೆತ್ತು ರೈತರು ವರ್ತಕರು ಮುಂತಾದ ಪ್ರಜೆಗಳೆಲ್ಲಾ ಕುಡಿಯುವದಕ್ಕೆ ಅಂಬಲಿಯೂ ಹೊದಿಯುವದಕ್ಕೆ ಚಿಂದಿಯೂ ಸಹ ಇಲ್ಲದೆ ಕಷ್ಟಪಡುವ ಕಾಲ ಸಂಭವಿಸಿದ್ದರಿಂದ, ಇದೆಲ್ಲಾ ಹಣದ ಮೇಲೆ ಅತ್ಯಾಶೆ ಉಳ್ಳ ಅರಸಿನಿಂದ ಬಂದ ಕಷ್ಟಗಳೆಂದು ನಿಶ್ಚೈಸಿ, ಇವನ ಧೊರೆತನ ಎಂದು ಹೋದೀತು, ಒಳ್ಳೇ ಧೊರೆ ಎಂದಿಗೆ ಬಂದಾನು, ಎಂದು ಪ್ರಜೆಗಳೆಲ್ಲಾ ಮಾಡುವ ಆಲೋಚನೆಯು ಬಹು ಪ್ರಕಟವಾಗಿ ಮಂತ್ರಿ ಸಭೆಗೆ ತಿಳಿಯಿತು.

ಆ ಸಭೆಯಲ್ಲಿರುವ ಮಂತ್ರಿ ಶ್ರೇಷ್ಠರೆಲ್ಲಾ ಕೂಡಿ ಈ ರಾಜಾರಿಷ್ಟವನ್ನು ಪರಿಹರಿಸಬೇಕೆಂದು ಆಲೋಚಿಸಿದ ಮೇಲೆ ವಿನಯಶೀಲನೆಂಬ ಮುಖ್ಯ ಪ್ರಧಾನಿಯು ಅರಸನ ಬಳಿಗೆ ಬಂದು ತನಗೆ ಕೇಡು ಬಂದಾಗ್ಯೂ ಚಿಂತೆಯಿಲ್ಲ ಪ್ರಜೆಗಳಿಗೆ ಕ್ಷೇಮವಾದರೆ ಸಾಕು, ಎಂತ ನಿಶ್ಚೈಸಿ ಧೈರ್ಯವನ್ನು ತಾಳಿ ಅರಸನೊಡನೆ ಪ್ರಭುವೇ, ನನ್ನ ವಿಜ್ಞಾಪನೆಯನ್ನು ಚಿತ್ತಕ್ಕೆ ತರಬೇಕು, ಏನಂದರೆ, ಉರುಳುವ ಗುಂಡಿನ ಮೇಲೆ ಇಟ್ಟ ವಸ್ತುವೂ ದುರುಳನಾಗಿ ಪ್ರಜೆಗಳ ಕಷ್ಟಪಡಿಸುವ ರಾಯನ ತಲೆಯ ಮೇಲೆ ಇಟ್ಟ ಕಿರೀಟವೂ ಸ್ಥಿರವಾಗಿ ನಿಲ್ಲಲಾರದು, ಈ ಮಾತು ನಾನು ಮಾತ್ರ ಆಡುತ್ತೇನೆಂದು ಆಗ್ರಹ ಪಡಕೆಲಸವಿಲ್ಲ, ನಮ್ಮ ರಾಜ್ಯದಲ್ಲಿರುವ ಆಬಾಲ ವೃದ್ಧರಾದ ಎಲ್ಲಾ ಪ್ರಜೆಗಳೂ ಪ್ರಕಟವಾಗಿ ಕೂಗುತ್ತಾರೆ, ನಾವು ಮಾಡುವ ಕಾರಬಾರದಿಂದ ಪ್ರಜೆಗಳಿಗೆ ಬಹಳ ತೊಂದರೆ ಸಂಭವಿಸಿ ಅನ್ನ ವಸ್ತ್ರಗಳಿಗೆ ಸಹ ಇಲ್ಲದೆ ಅಲೆಯುತ್ತಾರೆ, ನಿಶ್ಚಯವಾಗಿ ರಾಜ್ಯ ಕ್ಷೋಭೆಯಿಂದ ರಾಯನಿಗೆ ಕೇಡು ಬರುವದು, ರಾಜನು ಕೆಟ್ಟು ಹೋದ ಕ್ಷಣದಲ್ಲೇ ರಾಜ್ಯವನ್ನು ಪರರಾಯರು ಆಕ್ರಮಿಸಿಕೊಳ್ಳುವರು, ಆದ್ದರಿಂದ ಪ್ರಜೆಗಳ ತೊಂದರೆ ಪಡಿಸದವನೇ ಅರಸು, ತೊಂದರೆ ಪಡಿಸಿದವನೇ ಅರಸನು, ಅಂದರೆ ರಸವಿಲ್ಲದವನೆಂತ ಅರ್ಥವು, "ರಸವಿಲ್ಲದರಸು ಕಸಕ್ಕಿಂತಲೂ ಕಡೆ" ಎಂಬ ಗಾದೆಗೆ ಸರಿಯಾಗಿ ನಮಗೆ ಕಷ್ಟಗಳು ಸಂಭವಿಸುವವೆಂದು ಖಂಡಿತವಾಗಿ ಅರಿಕೆ ಮಾಡಿದ್ದೇನೆ, ಶತ್ರು ಸೈನ್ಯವೆಂಬ ದೊಡ್ಡ ಮಳೆ ಬಂದು, ಪ್ರಜಾಕ್ಷೋಭ ರಾಜ್ಯವೆಂಬ ಅಸತ್ತ್ವದ ಕೆರೇ ಕಟ್ಟೆ ಕಿತ್ತು ಹೋದ ತರುವಾಯ ದುಃಖಪಟ್ಟು ಪ್ರಯೋಜನವೇನು? ಅಂಥಾ ದುಃಖಕ್ಕೆ ಆಸ್ಪದ ಕೊಡದೆ

ಮುಂಚಿತವಾಗಿಯೇ ನೀತಿ ನ್ಯಾಯವೆಂಬ ಕಲ್ಲು ಕೆಲಸ ಮಣ್ಣು ಕೆಲಸಗಳಿಂದ ಕೆರೆಕಟ್ಟೆಯನ್ನು ಭದ್ರಪಡಿಸಿ ನೆಲೆಗೊಳಿಸ ಬೇಕೆಂದು ಹೇಳಿದನು. ಆ ಮಾತನ್ನು ಮನಸ್ಕರಿಸಿ ರಾಯನು ಅದು ಮೊದಲು ಶೀಮೆಯ ಪ್ರಜೆಗಳಿಗೆ ಅನ್ಯಾಯ ಅಪಡ್ಡಾಳ ಮಾಡದೆ ನ್ಯಾಯವಾಗಿ ರಾಜ್ಯವನ್ನಾಳುತ್ತಿದ್ದನು. ಪ್ರಜೆಗಳೆಲ್ಲಾ ಸಾಖ್ಯ ಹೊಂದಿದರು. ಹೀಗೆ ತಿದ್ದುಪಾಟು ಮಾಡುವ ಮಂತ್ರಿಯುಳ್ಳ ರಾಯನಿಗೂ ರಾಜ್ಯಕ್ಕೂ ಎಂದಿಗೂ ಸಾಖ್ಯ ಉಂಟಾಗುವದು.

---

## 68. DESERVING OF CHARITY.

### ೬೮. ದಾನ ಪಾತ್ರನು.

ಧರ್ಮಪತಿ ಎಂಬ ಪಟ್ಣಕ್ಕೆ ದಾನಶೀಲನೆಂಬ ಅರಸನು ಅಧಿಪತಿಯಾಗಿ ರಾಜಾಧಿರಾಜರ ನಿತ್ಯ ನೇಮಗಳಿಗೆ ಕೊರತೆ ಬಾರದಂತೆ ಪ್ರತಿನಿತ್ಯವೂ ಬಹಳ ಹಿರಣ್ಯ ದಾನ ಮಾಡುತ್ತಿದ್ದನು, ಅಂದರೆ ನೂರಾರು ಮಂದಿ ಬ್ರಾಹ್ಮಣರಿಗೆ ನೂರಾರು ವರಹಾಗಳು ದಾನ ಕೊಡುತ್ತಾ ಇರುವನು. ಈ ಮೇರಿಗೆ ಕೊಡುವ ಅರಸನ ವರ್ತಮಾನವನ್ನು ಕೇಳಿ ಇಬ್ಬರು ಬ್ರಾಹ್ಮಣರು ದೂರದೇಶದಿಂದ ಬಂದರು. ಅವರಲ್ಲಿ ಒಬ್ಬನು ವಿದ್ಯೆ ಕಲಿತವನಾಗಿಯೂ ಮತ್ತೊಬ್ಬನು ವಿದ್ಯೆ ಕಲಿಯದವನಾಗಿಯೂ ಇದ್ದನು. ಅವರಿಬ್ಬರಿಗೂ ತಲಾ ಒಂದೊಂದು ವರಹಾ ಮೇರಿಗೆ ಅರಸು ದಾನಾ ಕೊಟ್ಟನು, ಆಗ ಆ ಕಲಿತವನು ಹೊಟ್ಟೆಕಿಚ್ಚಿನಿಂದ ಎಲೈ ಅರಸೇ, ನಾನು ವಿದ್ಯ, ಬುದ್ಧಿ, ಚಾಕಚಕ್ಯ ಚಮತ್ಕಾರಗಳನ್ನೆ

ಲ್ಲಾ ತಿಳಿದವನು, ಆತ್ಮಸ್ತುತಿ ಪರನಿಂದೆ ಮಾಡುವವನಲ್ಲ, ಈ ವಿಪ್ರನು ನಿರಕ್ಷರಕುಕ್ಷಿ, ತುಂಟನು, "ಗೋತ್ರವರಿತು ಹೆಣ್ಣು ಕೊಡು, ಪಾತ್ರವರಿತು ಹೊನ್ನು ಕೊಡು" ಎಂದು ನೀತಿವಾಕ್ಯವಿರಲಾಗಿ, ಪಾತ್ರಾ ಪಾತ್ರ ವಿವೇಕವಿಲ್ಲದೆ ಇವನಿಗೂ ನನಿಗೂ ಸರಿಯಾಗಿ ದಾನ ಕೊಡ ಬಹುದೋ? ಅಂದನು. ಅದಕ್ಕರಸು ಏನೂ ಪ್ರತ್ಯುತ್ತರ ಕೊಡದೆ ಆ ದಿನ ಸುಮ್ಮನೆ ಇದ್ದು ಮರುದಿವಸ ದಾನಕಾಲದಲ್ಲಿ ಸಿದ್ಧವಾಗಿದ್ದ ಈ ಇಬ್ಬರಲ್ಲಿ ಹೊಟ್ಟೆಕಿಚ್ಚಿನವನಿಗೆ ಯಥಾಪ್ರಕಾರವಾಗಿ ಒಂದು ವರಹಾ ಕೊಟ್ಟು, ಎರಡನೇ ಬ್ರಾಹ್ಮಣನಿಗೆ ಎರಡು ವರಹಾ ಕೊಟ್ಟನು. ಆಗ ಈ ಅಸೂಯೆಗಾರನಿಗೆ ದುಃಖ ಹೆಚ್ಚಾಗಿ ಮತ್ತಷ್ಟು ಆಕ್ಷೇಪಿಸಿದನು. ರಾಯನು ನಕ್ಕು ಸುಮ್ಮನೆ ಇರು ಎಂದು ಗದರಿಸಿ ಕಳುಹಿಸಿದನು.

---

## 69. COSTLY ATTIRE.

## ೬೯. ಪಟಾಟೋಪ.

ಒಬ್ಬ ವಿದ್ವಾಂಸನು ಧನ ಗೌರವಗಳನ್ನು ಸಂಪಾದಿಸ ಬೇಕೆಂದು ಹೊರಟು ದೇಶ ಸಂಚಾರ ಮಾಡುತ್ತಿರಲು, ಮಾರ್ಗಾಯಾಸದಿಂದ ಬಂದ ರೋಗಾದಿಗಳನ್ನು ಸ್ವಸ್ಥ ಮಾಡಿ ಕೊಳ್ಳತಕ್ಕ ಬಗ್ಗೆ ಕೈಲಿದ್ದ ಹಣಕಾಸೆಲ್ಲಾ ವೆಚ್ಚವಾಗಿ ಹೋದದ್ದಲ್ಲದೆ, ಉಟ್ಟು ಹೊದ್ದು ಕೊಳ್ಳುವದಕ್ಕೆ ಅನುವಾದ ಒಂದು ವಸ್ತ್ರ ಸಹ ಇಲ್ಲದೆ ದೇಹ ಪೋಷಣೆ ಕಡಮೆಯಾದ್ದರಿಂದ ವಿರೂಪನಾಗಿ ಬಹು ಕಷ್ಟ ದೆಸೆಯನ್ನು ಅನುಭವಿಸುತ್ತಾ ಒಂದು ದೊಡ್ಡ ಊರಿಗೆ ತಲ

ಪಿಪಸು. ಆ ಊರಿನಲ್ಲಿ ಪ್ರತಿಷ್ಠಾಕಾಮಿಯಾಗಿ ಮಾರ್ಗಸ್ಥರಿಗೆ ಅನ್ನ ಕೊಡುವ ಒಬ್ಬ ಗ್ರಹಸ್ಥನಿದ್ದನು. ಅವನು ಅಲ್ಪ ಸ್ವಲ್ಪ ಯಾಚಕಕ ಸಹ ಕೊಡುವದುಂಟು, ಆದ್ದರಿಂದ ಉದಾರಿ ಎಂಬ ಹೆಸರು ಪಡೆದಿದ್ದನು. ಅವನ ಮನೆಗೆ ಈ ವಿದ್ವಾಂಸನು ವಸ್ತ್ರ ಕಾರ್ಪಣ್ಯದಿಂದ ಅನ್ನಾತುರನಾಗಿ ಬರಲು, ಅವನು ಇವನನ್ನು ನೀನು ಯಾರು? ಎಲ್ಲಿಂದ ಬಂದಿ? ಎಂದು ವಿಚಾರಿಸದೆ ಇದ್ದದ್ದಲ್ಲದೆ, ಕೂತುಕೊಳ್ಳುವದಕ್ಕೆ ಸ್ಥಳ ಸಹ ಕೊಡಲಿಲ್ಲ. ಅದನ್ನೋಡಿ ವಿದ್ವಾಂಸನು ಆ ದಿವಸ ಮತ್ತೊಂದು ಮನೆಗೆ ಭೋಜನಕ್ಕೆ ಹೋಗಿ ಮಾರನೇ ದಿನ ಧೋತ್ರ ಅಂಗವಸ್ತ್ರ ತಲೆಗೆ ಸುತ್ತಿಕೊಳ್ಳುವದಕ್ಕೆ ಶಾಲು ಸಹ ಎರವು ಸಂಪಾದಿಸಿಕೊಂಡು ಚನ್ನಾಗಿ ಗರಿಮುರಿಯಾಗಿ ಪುನಃ ಆ ಉದಾರಿಯ ಮನೆಗೆ ಬರುತ್ತಿದ್ದನು. ಅವನನ್ನು ಆ ಮನೆಯವನು ದೂರದಲ್ಲಿ ಕಂಡು ಎದ್ದು ನಿಂತು ಎದುರಾಗಿ ಬಂದು ಕಾಲುಮುಟ್ಟಿ ನಮಸ್ಕಾರ ಮಾಡಿ, ಹಸ್ತಲಾಘವ ಕೊಟ್ಟು ಮನೆಯ ಒಳಗೆ ಕರಕೊಂಡು ಮಣೆ ಹಾಕಿ ಕುಳ್ಳಿರಿಸಿ, ಯೋಗಕ್ಷೇಮ ವಿಚಾರಿಸಿ, ಕಾದಿದ್ದ ಹಂಡೆಯ ಬಿಸಿನೀರಿನಿಂದ ಸ್ನಾನ ಮಾಡಿಸಿ ಅವನಿಗೆ ಮುಕುಟವನ್ನು ಮಡಿಯುಡುವದಕ್ಕೆ ಕೊಟ್ಟು, ತನ್ನ ಪಙ್ತಿಯಲ್ಲಿ ಮೃಷ್ಟಾನ್ನ ಭೋಜನವನ್ನು ಇಡಿಸಿದನು. ಆ ವಿದ್ವಾಂಸನು ಭೋಜನಕ್ಕೆ ಕುಳಿತ ಕೂಡಲೇ ಮೊದಲು ಕಬಳವನ್ನು ಎತ್ತಿ ಹೊದ್ದ ವಸ್ತ್ರದ ಮೇಲೆ ಇಟ್ಟನು. ಇದೇನೆಂದು ಆಶ್ಚರ್ಯದಿಂದ ಮನೆಯವನು ಕೇಳಲು, ವಿದ್ವಾಂಸನು ಎಲೈ ಗ್ರಹಸ್ಥನೇ, ನೀನಿಟ್ಟ ಮೃಷ್ಟಾನ್ನವು ಈ ವಸ್ತ್ರಗಳಿಗಲ್ಲದೆ ನನಗಲ್ಲ, ಯಾಕಂದರೆ, ವಸ್ತ್ರಹೀನನಾಗಿ ನಿನ್ನೆ ದಿವಸ ಬಂದಿದ್ದೆ, ನನ್ನನ್ನು ಸ್ವಲ್ಪವಾದರೂ ಪರಾಂ

ಬರಿಸದೆ ಅನಾದರಣೆ ಮಾಡಿದಿಯಲ್ಲಾ, "ಪಟಾಟೋಪೋ ಭಯಂ ಕರಃ" ಎಂಬ ನೀತಿ ವಾಕ್ಯಕ್ಕೆ ಸರಿಯಾಗಿ ಎರವಾಗಿ ಉಟ್ಟು ಕೊಂಡು ಹೊದ್ದು ಕೊಂಡು ಬಂದ ಈ ವಸ್ತ್ರಗಳ ಆಟೋಪಕ್ಕೆ, ಬಹಳ ಭಯ ಪಟ್ಟವನ ಹಾಗೆ, ನನಗೆ ಉಪಚಾರಗಳನ್ನು ಮಾಡಿ ದಿಯಷ್ಟೆ, ನಿನ್ನ ಹಾಗೆ ಸಾಮಾನ್ಯರು ಲೋಕದಲ್ಲಿ ಬಹಳ ಮಂದಿ ಉಂಟು, ಪಾರಮಾರ್ಥಿಕರನ್ನು ಹುಡಿಕಿ ಹಿಡಿಯುವದು ಬಹಳ ಕಷ್ಟವಾಗಿರುವದೆಂದನು. ಈ ಮಾತುಗಳನ್ನೆಲ್ಲಾ ಕೇಳಿ ಮನೆ ಯವನು ನಾಚಿಕೆ ಪಟ್ಟು ಭೋಜನವಾದ ತರುವಾಯ, ವಸ್ತ್ರ ತಾಂಬೂಲ ದಕ್ಷಿಣೆ ಸಹ ವಿನಯದಿಂದ ಕೊಟ್ಟು ನಮಸ್ಕರಿಸಿ ಸಮಾಧಾನ ಪಡಿಸಿ ಕಳುಹಿಸಿದನು. ಹೀಗೆ ಯಾರಿಗಾದರೂ ಸರಿ ವಸ್ತ್ರವೇ ಭೂಷಣ.

---

## 70. THE STUBBORNNESS OF THE RYOT.

### ೭೦. ಬಕ್ಕಲಿಗನ ಮೊಂಡತನ.

ಚಂಡಿ ಎಂಬ ಪಟ್ಟಣಕ್ಕೆ ಸೇರಿದ ರಾಜ್ಯವನ್ನು ಚಂದ್ರಹಾಸನೆಂ ಬ ರಾಯನು ಆಳುತ್ತಿರುವಲ್ಲಿ ಪ್ರಜೆಗಳು ಅನ್ಯಾಯದ ತೆರಿಗೆ ದಂಡ ದ್ರೋಹಗಳಿಗೆ ಗುರಿಯಾಗಿ ಇದ್ದರು. ಆಗ ಮುಂಡೂ ರೆಂಬ ಗ್ರಾಮದಲ್ಲಿ ಮೊಂಡುನಾಗನೆಂಬ ಒಬ್ಬ ರೈತನು ಬಲು ಪುಂಡುಗಾರನಾಗಿದ್ದನು. ಅವನು ತಾನು ಮಾಡುವ ಹೊಲ ಗದ್ದೆ ತೋಟ ಮುಂತಾದ ಭೂಮಿಗಳಿಗೆ ದಂಡ ತೆತ್ತು ತೆತ್ತು "ತಿಂಬುವ ಹಿಟ್ಟು ಬೆಲ್ಲವಾಗಿ ತಿಕದ ಮೇಲಿನ ಬಟ್ಟೆ ಜಾವಾಗ"

ಎಂಬ ಗಾದೆಗೆ ಸರಿಯಾಗಿ ಬಡವರೊಳಗೆಲ್ಲಾ ಅತಿ ಬಡವನಾದನು.
ಹಾಗಾದರೂ ತೆರುವ ದಂಡ ತಪ್ಪದೆ ಹೋದ್ದರಿಂದ ಅವನು "ಧೊ
ರೆ ತನಕ ದೂರು, ಹೊಳೆತನಕ ಓಟ" ಎಂಬ ಸಾಮತಿಯನ್ನು
ನೆನಸಿಕೊಂಡು, ಅರಮನೆಯವರು ತೆರಿಗೇ ಹಣಕ್ಕೆ ಮನೇ ಬಾ
ಗಲು ಬಿರೀ ಕಟ್ಟಿ ಮುದ್ರೆ ಹಾಕಲು, ಕೋರಿ ಕಂಬಳಿ ಮೇಲೆ ಹಾ
ಕಿಕೊಂಡು, ಒಂದೇ ಓಟಕ್ಕೆ ಅರಸನ ಬಳಿಗೆ ಬಂದು ಅಡ್ಡ ಬಿದ್ದ
ನು. ಏನೆಂದರಸನು ಕೇಳಲು, ಸೋಮಿ, ಬುದ್ಧಿ, ಹನ್ನೆರಡು
ವರುಷದಿಂದ ಅನ್ಯಾಯದ ದಂಡಾ ತೆತ್ತು ತೆತ್ತು ನನ್ನ ಮನೆ
ಹಾಳಾಗಿ ಹೋಯಿತು, ಅರಮನೆ ಎಂದಿಗೆ ಹಾಳಾದೀತೋ ಎಂದು
ಕೇಳುವದಕ್ಕೆ ಬಂದಿದ್ದೇನೆ, ನನ್ನ ತೆರಿಗೆ ಹಣವೆಲ್ಲಾ ಬಿಡಿಸಿ
ಬಿಟ್ಟರೂ ಸರಿಯೇ, ಎಲ್ಲಿಗಾದರೂ ಹೋಗೆಂದು ಹೇಳಿದರೂ ಸರಿ
ಯೇ, ಇದರ ಮೇಲೆ ನನ್ನ ಪ್ರಾಣ ತೆಕ್ಕೊಂಡರೂ ಸರಿಯೇ,
ಈ ಮೂರು ಮಾತುಗಳೊಳಗೆ ಯಾವ ಮಾತು ಅಪ್ಪಣೆ ಕೊ
ಡುತ್ತೀರಿ? ಎಂದು ಮೊರೆ ಇಟ್ಟನು. ಅದ ಕೇಳಿ, ಅರಸನು
ಎಲಾ ತುಂಟನೇ, ನೀನು ತೆರತಕ್ಕ ಕಂದಾಯದ ಹಣದಲ್ಲಿ ನೀನು
ಸತ್ತಾಗ್ಯೂ ಒಂದು ಕಾಸು ಬಿಡುವದಿಲ್ಲ, ನಮ್ಮ ಶೀಮೆಯೊಳಗೆ
ಇದ್ದರೆ ಇರು, ಇಲ್ಲದಿದ್ದರೆ ತಲೇ ಮೇಲೆ ಗುಡ್ಡೆ ಹಾಕ್ಕೊಂಡು
ನಿನ್ನ ಮನಸ್ಸು ಬಂದ ಕಡೆಗೆ ಹೋಗೆಂದನು.

ಅದಕ್ಕಾ ಮೊಂಡೊಕ್ಕಲಿಗನು ಒಳ್ಳೇ ಮಾತು, ಒಳ್ಳೇ ಮಾ
ತು, ತೆರಿಗೆ ಬಿಡದ ಪಕ್ಷದಲ್ಲಿ ನಾನು ಹೋಗ ಬೇಕಾದ ತಾವನ್ನು
ತಾವೇ ಅಪ್ಪಣೆ ಕೊಡ ಬೇಕೆಂದನು. ರಾಯನು ಶ್ರೀರಂಗ
ಪಟ್ಣಕ್ಕೆ ಹೋಗೆಂದನು. ರೈತನು ಶ್ರೀರಂಗ ಪಟ್ಣಕ್ಕೆ ನಿಮ್ಮ
ಚಿಕ್ಕಪ್ಪನೇ ಧೊರೆಯಾಗಿದ್ದಾನೆ, ತಂಜಾವೂರು ಶೀಮೆಗೆ ಹೋ

ಗೆಂದೀರಿ, ಅದು ನಿಮ್ಮ ತಮ್ಮನ ರಾಜ್ಯ, ಆಮುಕಾಟೆಗೆ ಹೋಗಂದರೆ ಅದನ್ನು ನಿಮ್ಮ ಅಣ್ಣನು ಆಳುತ್ತಾನೆ, ಮತ್ತು ಬಂದರು ಸೀಮೆ ನಿಮ್ಮ ಭಾವನದು, ಮೈಲಾಪ್ರೂರು ಚನ್ನಪಟ್ಣವು ನಿಮ್ಮ ಮೈದುನನದು. ನಾನು ಇನ್ನೆಲ್ಲಿಗೆ ಹೋಗಲಿ, "ರಾಮೇಶ್ವರ ಹೋದರೂ ಶನೇಶ್ವರ ಬಿಡದು," ಒಕ್ಕಲಿಗರನ್ನು ಕಾಡಿಸೋದು ಧೊರೆಗಳಿಗೆ ಒಳ್ಳೇದಲ್ಲ, ಇನ್ನೆಲ್ಲಿಗೆ ಹೋಗೆಂದು ಅಪ್ಪಣೆ ಆಗುತ್ತದೆ, ಎಂತ ಧಟ್ಟಿಯಾಗಿ ಕೂಗಿದನು. ರಾಯನಿಗೆ ಕೋಪ ಬಂದು ಆತನು ಎಲಾ ತುಂಟಾ, ನರಕಕ್ಕೆ ಹೋಗು ಎಂದು ಗದರಿದನು. ಒಕ್ಕಲಿಗನು ನರಕಕ್ಕೆ ಹೋದರೂ ಅಲ್ಲಿ ನಿಮ್ಮ ಹೆತ್ತಪ್ಪ ಮುತ್ತಪ್ಪ ಮುಂತಾದ ಸತ್ತಪ್ಪನವರೆಲ್ಲಾ ಇದ್ದಾರಂತಲ್ಲಾ, ಅಲ್ಲಿಗೆ ಹೋಗೋದಕ್ಕಿಂತಲೂ ಕೂಲೋ ನಾಲೋ ಮಾಡಿ ಕೊಂಡು ಇಲ್ಲಿ ಇರುವದೇ ವಾಸಿ, ಎಂದು ಭಯವಿಲ್ಲದೆ ಮಾತನಾಡಿದನು. ಬಳಿಕ ರಾಯನು ಆ ಮೊಂಡೊಕ್ಕಲಿಗನ ತೆರಿಗೆ ಎಲ್ಲಾ ಬಿಡಿಸಿ ಛೀ! ಎಲ್ಲಿಗಾದರೂ ಹೋಗೆಂದು ತಳ್ಳಿಸಿ ಬಿಟ್ಟನು. ಈ ಮೇರಿಗೆ ಮೊಂಡುತನದಲ್ಲಿ ಬದುಕುವ ಒಕ್ಕಲಿಗರಿಗೆ ತಿಂಡಿಗೂ ಇಲ್ಲ, ತುಂಡಕ್ಕೂ ಇಲ್ಲ.

---

## 71. THE OMEN OF THE CROWS.

### ೭೧. ಕಾಗಿಯ ಶಕುನ.

ಬೆಳಗಾಗಿ ಏಳುತ್ತಲೇ ಎರಡು ಕಾಗಿಗಳು ಒಂದೇ ಕಡೆ ಕೂತಿರುವದನ್ನು ನೋಡಿದರೆ ಬಲು ಒಳ್ಳೇದೆಂಬ ಅವಿವೇಕನ ಪದ

ತಿಯನ್ನು ಕೇಳಿ, ಅವಿವೇಕಿಗಳಿಗೆಲ್ಲಾ ಶಿಖಾಮಣಿಯಾದ ಒಬ್ಬ ಮನುಷ್ಯನು ತಾನೂ ಹಾಗೆ ಮಾಡ ಬೇಕೆಂದು ತನ್ನ ಮನೆಯಲ್ಲಿರುವ ಆಳನ್ನು ಕರದು ಎಲಾ ತಿಕ್ಕಲತಿಮ್ಮಾ, ನಾಳೆ ಹೊತ್ತು ಹುಟ್ಟುವದಕ್ಕೆ ಮುಂಚಿತವಾಗಿ ಜೋಡು ಕಾಗಿಗಳನ್ನು ನೋಡಿ ಬಂದು ನನ್ನನ್ನು ಎಬ್ಬಿಸೆಂದು ರಾತ್ರಿಯೇ ಹೇಳಿ ಇದ್ದನು. ಆ ಆಳು ಅದೇ ಮೇರಿಗೆ ಊರು ಮುಂದಿನ ಹುಂಗೇ ಮರದ ಮೇಲಿದ್ದ ಜೋಡು ಕಾಗಿಗಳನ್ನು ಕಂಡು ಬಂದು, ಅಪ್ಪಾ, ಬೇಗ ಏಳು, ಕಾಗಿಯ ಜೋಡು ನೋಡು, ಎಂದೆಬ್ಬಿಸಿದನು. ಈ ಅವಿವೇಕಿಯು ಬೆಬ್ಬರಿಸಿ ಕೊಂಡು ದಿಗ್ಗನೆ ಎದ್ದು ಕಣ್ಣೊರಸುತ್ತಾ, ತನ್ನ ತಲಬಾಗಲಿಗೆದುರಾಗಿ ಕಾಣಿಸುವ ಊರು ಮುಂದಿನ ಹುಂಗೇ ಮರದ ಮೇಲೆ ನೋಡಲು, ಆಳು ಕಂಡು ಬಂದು ಹೇಳಿದ್ದ ಎರಡು ಕಾಗಿಗಳಲ್ಲಿ ಒಂದು ಓಡಿ ಹೋಗಿ ಎರಡನೇದು ಮಾತ್ರ ಕರ್ರಕರ್ರೆಂದು ಕೂಗುತ್ತಾ ಕೂತಿರುವದನ್ನು ಕಂಡು, ಎಲಾ ತಿಕ್ಕಲತಿಮ್ಮಾ, ನಾನು ಹೇಳಿದ ಹಾಗೆ ಎರಡು ಕಾಗಿಗಳಿಲ್ಲದೆ ಒಂದೇ ಕಾಗಿ ಮಾತ್ರ ಕೂತಿರುವಾಗ ನನ್ನನ್ನು ಎಬ್ಬಿಸಿದಿಯಲ್ಲದೆ ಮೊದಲೇ ಎಬ್ಬಿಸದೆ ಹೋದಿಯಲ್ಲಾ, ಎಂದು ಕೋಪಗೊಂಡು ಆ ಆಳನ್ನು ಕೆನ್ನೆಗೆ ಹೊಡದು ಕಿವಿ ಹಿಂಡಿ ಬೈದು, ಕಾಲಲ್ಲಿ ಒದ್ದನು. ಆಗ ಆಳು, ಅಯ್ಯೋ! ಅಪ್ಪಾ, ನಿನ್ನ ಮಾತಿನ ಮೇರಿಗೆ ಹೊತಾರೇ ಹೊತ್ತು ಜೋಡು ಕಾಗಿಗಳನ್ನು ನೋಡಿ ಬಂದದ್ದಕ್ಕೆ ನನಗೆ ಪೂರಾ ಶಾಂತಿ ಆಯಿತು, ನಿನಗೂ ನಾಳೆ ದಿವಸ ಬೇಕಾದರೆ ಆದೀತು, ಎಂದು ಹೇಳಿದನು. ಅದ ಕೇಳಿ ಎಜಮಾನನು ನಾಚಿಕೆ ಪಟ್ಟು, ಎಲಾ ತಿಮ್ಮಪ್ಪಾ, ನೀನು ತಿಕ್ಕಲ ತಿಮ್ಮನಲ್ಲ, ನಾನೇ ತಿಕ್ಕಲ ತಿಮ್ಮನು, ನೀನು ಬ

ಕ್ಕಲ ತಿಮ್ಮನು, ಎಂದು ಸಮಾಧಾನ ಪಡಿಸಿದನು. ಇದೇ ಜಾನಸಗಾರರ ಸಂಗತಿಯು.

---

## 72. THE TRICKSTER.

## ೭೨. ತಂತ್ರಗಾರನು.

ಕಾಶೀ ದೇಶದಿಂದ ಒಬ್ಬ ತಂತ್ರಗಾರನು ಹೊರಟು ದೇಶ ಸಂಚಾರ ಮಾಡುತ್ತಾ, ಮಾರ್ಗದಲ್ಲಿ ನಿಷ್ಕಪಟಿ ಎಂಬ ರಾಯನಾಳುವ ನೇತ್ರಾವತಿ ಎಂಬ ಪಟ್ಣಕ್ಕೆ ಬಂದು ಬಹಳ ಡಾಂಭಿಕತನವನ್ನು ವಹಿಸಿ ರಾಜಾಸ್ಥಾನವನ್ನು ಪ್ರವೇಶಿಸಿ ರಾಯನನ್ನು ಕಂಡು ವಿದ್ಯಾವಂತರ ಮರ್‍ಯಾದೆ ಪ್ರಕಾರಕ್ಕೆ ಕೊಂಡಾಡಿ ಹೊಗಳಿದನು. ರಾಯನು ಅವನನ್ನು ನೋಡಿ ನೀನ್ಯಾರು? ಎಲ್ಲಿಂದ ಬಂದಿ? ನಿನಗೆ ಯಾವ ವಿದ್ಯದಲ್ಲಿ ಪರಿಚಯ ವುಂಟು? ಎಂದು ಕೇಳಲು, ತಂತ್ರಗಾರನು ನಾನು ಗೋಕುಲ ಬೃಂದಾವನದಿಂದ ಬಂದು ಕಾಶಿಯಲ್ಲಿ ದೊಡ್ಡ ವಿದ್ವಾಂಸನಾಗಿ ಸರ್ವತಂತ್ರನೆಂಬ ಬಿರಿದಿನ ಘಂಟೆ ಕಟ್ಟಿ ಇದ್ದೇನೆ, ಈಗ ನಿಂತಿರುವ ಸಮುದ್ರವನ್ನಾದರು ಕುಡಿಯ ಬಲ್ಲೆನು, ನನ್ನ ವಿದ್ಯೆಯನ್ನು ಪರಿಕ್ಷಿಸಿ ನೋಡಿ ಸಂತೋಷ ಪಡುವ ಪ್ರಭು ಸಾರ್ವಭೌಮನು ನೀನೇ ಸರಿ, ಎಂದು ಬಹಳವಾಗಿ ಕೊಂಡಾಡಲು, ರಾಯನಿಗೆ ಉಬ್ಬಿಟ ಮುಟ್ಟಿ ಸಮುದ್ರವನ್ನು ಪಾನಾ ಮಾಡುವ ಕೆಲಸವು ಅಗಸ್ತ್ಯ ಮಹಾ ಮುನೀಶ್ವರನಿಂದ ಹಿಂದಕ್ಕಾಯಿತೆಂಬ ಪುರಾಣ ವಚನಗಳನ್ನು ಕೇಳಿ ಇದ್ದೇನೇ, ಈಗ ನೀನು ಸಮುದ್ರವನ್ನು

ತಿಯನ್ನು ಕೇಳಿ, ಅವಿವೇಕಿಗಳಿಗೆಲ್ಲಾ ಶಿಖಾ ಮಣಿಯಾದ ಒಬ್ಬ ಮನುಷ್ಯನು ತಾನೂ ಹಾಗೆ ಮಾಡ ಬೇಕೆಂದು ತನ್ನ ಮನೆಯಲ್ಲಿರುವ ಆಳನ್ನು ಕರದು ಎಲಾ ತಿಕ್ಕಲತಿಮ್ಮಾ, ನಾಳೆ ಹೊತ್ತು ಹುಟ್ಟುವದಕ್ಕೆ ಮುಂಚಿತವಾಗಿ ಜೋಡು ಕಾಗಿಗಳನ್ನು ನೋಡಿ ಬಂದು ನನ್ನನ್ನು ಎಬ್ಬಿಸೆಂದು ರಾತ್ರಿಯೇ ಹೇಳಿ ಇದ್ದನು. ಆ ಆಳು ಅದೇ ಮೇರಿಗೆ ಊರು ಮುಂದಿನ ಹುಂಗೇ ಮರದ ಮೇಲಿದ್ದ ಜೋಡು ಕಾಗಿಗಳನ್ನು ಕಂಡು ಬಂದು, ಅಪ್ಪಾ, ಬೇಗ ಏಳು, ಕಾಗಿಯ ಜೋಡು ನೋಡು, ಎಂದೆಬ್ಬಿಸಿದನು. ಈ ಅವಿವೇಕಿಯು ಬೆಬ್ಬರಿಸಿ ಕೊಂಡು ದಿಗ್ಗನೆ ಎದ್ದು ಕಣ್ಣೊರಸುತ್ತಾ, ತನ್ನ ತಲಬಾಗಲಿಗೆದುರಾಗಿ ಕಾಣಿಸುವ ಊರು ಮುಂದಿನ ಹುಂಗೇ ಮರದ ಮೇಲೆ ನೋಡಲು, ಆಳು ಕಂಡು ಬಂದು ಹೇಳಿದ್ದ ಎರಡು ಕಾಗಿಗಳಲ್ಲಿ ಒಂದು ಓಡಿ ಹೋಗಿ ಎರಡನೇದು ಮಾತ್ರ ಕರ್ರಕರ್ರೆಂದು ಕೂಗುತ್ತಾ ಕೂತಿರುವದನ್ನು ಕಂಡು, ಎಲಾ ತಿಕ್ಕಲತಿಮ್ಮಾ, ನಾನು ಹೇಳಿದ ಹಾಗೆ ಎರಡು ಕಾಗಿಗಳಿಲ್ಲದೆ ಒಂದೇ ಕಾಗಿ ಮಾತ್ರ ಕೂತಿರುವಾಗ ನನ್ನನ್ನು ಎಬ್ಬಿಸಿದಿಯಲ್ಲದೆ ಮೊದಲೇ ಎಬ್ಬಿಸದೆ ಹೋದಿಯಲ್ಲಾ, ಎಂದು ಕೋಪಗೊಂಡು ಆ ಆಳನ್ನು ಕೆನ್ನೆಗೆ ಹೊಡದು ಕಿವಿ ಹಿಂಡಿ ಬೈದು, ಕಾಲಲ್ಲಿ ಒದ್ದನು. ಆಗ ಆಳು, ಅಯ್ಯೋ! ಅಪ್ಪಾ, ನಿನ್ನ ಮಾತಿನ ಮೇರಿಗೆ ಹೊತಾರೇ ಹೊತ್ತು ಜೋಡು ಕಾಗಿಗಳನ್ನು ನೋಡಿ ಬಂದದ್ದಕ್ಕೆ ನನಗೆ ಪೂರಾ ಶಾಂತಿ ಆಯಿತು, ನಿನಗೂ ನಾಳೆ ದಿವಸ ಬೇಕಾದರೆ ಆದೀತು, ಎಂದು ಹೇಳಿದನು. ಅದ ಕೇಳಿ ಎಜಮಾನನು ನಾಚಿಕೆ ಪಟ್ಟು, ಎಲಾ ತಿಮ್ಮಪ್ಪಾ, ನೀನು ತಿಕ್ಕಲ ತಿಮ್ಮನಲ್ಲ, ನಾನೇ ತಿಕ್ಕಲ ತಿಮ್ಮನು, ನೀನು ಒ

ಕ್ಕಲ ತಿಮ್ಮನು, ಎಂದು ಸಮಾಧಾನ ಪಡಿಸಿದನು. ಇದೇ ಜಾನಸಗಾರರ ಸಂಗತಿಯು.

---

## 72. THE TRICKSTER.

### ೭೨. ತಂತ್ರಗಾರನು.

ಕಾಶೀ ದೇಶದಿಂದ ಒಬ್ಬ ತಂತ್ರಗಾರನು ಹೊರಟು ದೇಶ ಸಂಚಾರ ಮಾಡುತ್ತಾ, ಮಾರ್ಗದಲ್ಲಿ ನಿಷ್ಕಪಟಿ ಎಂಬ ರಾಯನಾಳುವ ನೇತ್ರಾವತಿ ಎಂಬ ಪಟ್ಣಕ್ಕೆ ಬಂದು ಬಹಳ ಡಾಂಭಿಕತನವನ್ನು ವಹಿಸಿ ರಾಜಾಸ್ಥಾನವನ್ನು ಪ್ರವೇಶಿಸಿ ರಾಯನನ್ನು ಕಂಡು ವಿದ್ಯಾವಂತರ ಮರ್‍ಯಾದೆ ಪ್ರಕಾರಕ್ಕೆ ಕೊಂಡಾಡಿ ಹೊಗಳಿದನು. ರಾಯನು ಅವನನ್ನು ನೋಡಿ ನೀನ್ಯಾರು? ಎಲ್ಲಿಂದ ಬಂದಿ? ನಿನಗೆ ಯಾವ ವಿದ್ಯದಲ್ಲಿ ಪರಿಚಯವುಂಟು? ಎಂದು ಕೇಳಲು, ತಂತ್ರಗಾರನು ನಾನು ಗೋಕುಲ ಬೃಂದಾವನದಿಂದ ಬಂದು ಕಾಶಿಯಲ್ಲಿ ದೊಡ್ಡ ವಿದ್ವಾಂಸನಾಗಿ ಸರ್ವತಂತ್ರನೆಂಬ ಬಿರಿದಿನ ಘಂಟೆ ಕಟ್ಟಿ ಇದ್ದೇನೆ, ಈಗ ನಿಂತಿರುವ ಸಮುದ್ರವನ್ನಾದರು ಕುಡಿಯ ಬಲ್ಲೆನು, ನನ್ನ ವಿದ್ಯೆಯನ್ನು ಪರಿಕ್ಷಿಸಿ ನೋಡಿ ಸಂತೋಷ ಪಡುವ ಪ್ರಭು ಸಾರ್ವಭೌಮನು ನೀನೇ ಸರಿ, ಎಂದು ಬಹಳವಾಗಿ ಕೊಂಡಾಡಲು, ರಾಯನಿಗೆ ಉಬ್ಬಟೆ ಹುಟ್ಟಿ ಸಮುದ್ರವನ್ನು ಪಾನಾ ಮಾಡುವ ಕೆಲಸವು ಅಗಸ್ತ್ಯ ಮಹಾ ಮುನೀಶ್ವರನಿಂದ ಹಿಂದಕ್ಕಾಯಿತೆಂಬ ಪುರಾಣ ವಚನಗಳನ್ನು ಕೇಳಿ ಇದ್ದೇನೇ, ಈಗ ನೀನು ಸಮುದ್ರವನ್ನು

ಕುಡಿವರೆ ಈ ಮಹದಾಶ್ಚರ್ಯವನ್ನು ನೋಡ ಬೇಕಾದ್ದೇ ಸರಿ, ಅದಕ್ಕೆ ನಿನಗೆ ಏನು ಆಯಕಟ್ಟು ಮಾಡಿಸಿ ಕೊಡಬೇಕೆಂದು ಕೇಳಿದನು. ಅದಕ್ಕಾ ತಂತ್ರಗಾರನು ಈಗ ಸಾವಿರ ವರಹಾ ಕೊಟ್ಟರೆ ಕುಂಭ ಸಂಭವನಾದ ಅಗಸ್ತ್ಯ ಮಹಾ ಮುನಿಯನ್ನು ಉಪಾಸನ ಪೂರ್ವಕವಾಗಿ ಪ್ರಾರ್ಥಿಸಿ ಕಾರ್ಯವನ್ನು ನೆರವೇರಿಸುವೆನು, ತರುವಾಯ ನನಗೆ ಆಗತಕ್ಕ ಬಹುಮಾನವನ್ನು ನಡಿಸ ತಕ್ಕದ್ದು ತಮ್ಮನ್ನ ಶೇರಿಯಿರುತ್ತದೆಂದನು. ಅದೇ ಪ್ರಕಾರಕ್ಕೆ ರಾಯನು ಮೂರು ಸಾವಿರದ ಐನೂರು ರೂಪಾಯನ್ನು ಖಜಾನೆಯಿಂದ ಕೊಡಿಸಿ ಕೊಟ್ಟನು. ಅದನ್ನೆಲ್ಲಾ ತೈಲಿ ಬಂದಕ್ಕೆ ಐನೂರು ರೂಪಾಯಿ ಪ್ರಕಾರ ಏಳು ತೈಲಿಗಳಾಗಿ ಕಟ್ಟಿ ರಹಸ್ಯವಾದ ಸ್ಥಳಗಳಲ್ಲಿ ಬಚ್ಚಿಟ್ಟು, ತಂತ್ರಗಾರನು ಸಮುದ್ರ ತೀರಕ್ಕೆ ಹೋಗಿ ಕುಳಿತು, ದಿನ ಮಧ್ಯಾಹ್ನದ ಮೇಲೆ ರಾಯನನ್ನು ಬರ ಹೇಳಿ ವರ್ತಮಾನ ಕೊಟ್ಟನು. ರಾಯನು ಪರಿವಾರದೊಡನೆ ಬಂದು ತಂತ್ರಗಾರನನ್ನು ಕುರಿತು ಯಾಕೆ ಸಾವಕಾಶ ಮಾಡುತ್ತೀ? ಕಡಲನ್ನು ತಡೆಬಡೆ ಯಿಲ್ಲದೆ ಕುಡಿದು ಬಿಡು, ನೋಡೋಣ, ಎನ್ನಲು ತಂತ್ರಗಾರನು ಎಲೈ ಒಡೆಯನೇ, ಪಡವಲು ಬಡಗಲು ಮೂಡಲು ಈ ಮೂರು ಕಡೆಗಳಿಂದ ಸಮುದ್ರದಲ್ಲಿ ಬಂದು ಬೀಳುವ ಹೊಳೆಗಳನ್ನು ಬಾರದ ಹಾಗೆ ಅವುಗಳ ಬಾಯಿಗಳನ್ನು ಕಟ್ಟಿ ಬಿಟ್ಟೆನು. ತೆಂಕಲಾದ ದಕ್ಷಿಣ ದೇಶದಲ್ಲಿ ಹರಿಯುವ ಕಾವೇರಿ ನದಿಯ ಮುಖವನ್ನು ಮಾತ್ರ ನನ್ನ ಮಂತ್ರಶಕ್ತಿಯಿಂದ ಕಟ್ಟುವದಕ್ಕೆ ಅಸಾಧ್ಯವಾಗಿ ಇದೆ, ಪ್ರಭುವಾದ ನೀನು ಇಷ್ಟು ಮಾತ್ರ ಬಂದೋಬಸ್ತು ಮಾಡಿಸಿ ಕೊಟ್ಟರೆ, ಮೇಲು ನೀರು ಬಂದು

ಬೀಳದೆ ನಿಂತ ಸಮುದ್ರವನ್ನು ತುಸ ನೀರು ಸಹ ಯಿಲ್ಲದ ಹಾಗೆ ಈ ಕ್ಷಣವೇ ಕುಡಿದು ಬಿಡುತ್ತೇನೆಂದನು. ಅವನ ತಂತ್ರಕ್ಕೆ ರಾಯನು ನಕ್ಕು ಅಗಸ್ತ್ಯರಿಗೆ ಪ್ರತಿ ಕಕ್ಷಿಯಾಗಿ ಸಮು ದ್ರವನ್ನು ಕುಡಿಯುವದಕ್ಕೆ ಸಿದ್ಧವಾದ ನಿನ್ನನ್ನು ಅದೇ ಸ ಮುದ್ರದಲ್ಲಿ ಕಟ್ಟಿ ಹಾಕಿಸಿ ಬಿಡುತ್ತೇನೆಂದು ಬೆದರಿಸಲು, ತಂತ್ರ ಗಾರನು ಹಾಗೆ ತಾವು ಮಾಡಿಸಿದರೆ ಮಡಿದು ಹೋಗುತ್ತೇನೆ, ಕುಡಿಯುವದು ಮಡಿಯುವದು ಎರಡೂ ನನ್ನ ಪಾಲಿಗೆ ಒಂದೇ ಅಲ್ಲವ್ರೋ ? ಅಂದನು. ಈ ಮೇರಿಗೆ ತಂತ್ರಗಾರರು ಎಷ್ಟಕ್ಕಂ ದರೆ ಅಷ್ಟಕ್ಕೆ ಸಿದ್ಧವಾಗಿ ಇರುವರು.

---

## 73. THE KING'S POLICY.

## ೭೩. ರಾಜ ಪದ್ಧತಿ.

ರಾಜಕೇಸರಿ ಎಂಬ ರಾಯನು ಧರ್ಮದಿಂದ ರಾಜ್ಯವನ್ನಾಳು ತ್ತಿರುವಾಗ ಸಕಲ ಪ್ರಜೆಗಳೂ ತಮ್ಮ ತಮ್ಮ ಸ್ವಧರ್ಮಗಳು ತಪ್ಪದ ಹಾಗೆ ನಡಿಯುತ್ತಿರುವರು. ಅದರಿಂದಲೇ ಕಾಲ ಕಾಲ ಕ್ಕೂ ತಪ್ಪದ ಹಾಗೆ ಮಳೆ ಬಿದ್ದು ಬೆಳೆಯಾಗಿ ಪ್ರಜೆಗಳಿಗೆ ಸಂ ತೋಷವೂ ಅರಮನೆಗೆ ಹಣವೂ ಹುಟ್ಟುತ್ತಿರುವದು. ರಾಯನು ಆ ಬಂದ ಹಣದಲ್ಲಿ ಒಂದು ಪಾಲು ಬೊಕ್ಕಸಕ್ಕೆ ಸೇರಿಸಿ, ಮಿ ಕ್ಕ ಐದು ಪಾಲನ್ನು ಧರ್ಮ ವೆಚ್ಚ ಮಾಡುತ್ತಾ ಧರ್ಮಾತ್ಮನೆಂ ದು ಹೆಸರು ಪಡದು ಬಹು ಕಾಲ ರಾಜ್ಯವನ್ನಾಳಿ ಮುದಕನಾದ ತರುವಾಯ ತನ್ನ ಹಿರಿಯ ಮಗನನ್ನು ಕರದು, ಎಲೈ ಮಗ

ನೇ, ಬಹುಕಾಲ ರಾಜ್ಯಭಾರಾ ವಹಿಸಿದ ನನ್ನ ಭುಜಗಳು ಈಗ ಮುಪ್ಪಿನಿಂದ ಅದನ್ನು ವಹಿಸಲಾರವು, ನೀನು ರಾಜ್ಯಭಾರವನ್ನು ವಹಿಸಿ ನನಗೆ ವಿಶ್ರಾಂತಿಯನ್ನು ಕೊಟ್ಟೆಯಾದರೆ ನಾನು ನಿಶ್ಚಿಂತೆಯಾಗಿ ಪರಲೋಕ ಸುಖವನ್ನು ಸುಪುತ್ರನಾದ ನಿನ್ನ ಸಹಾಯದಿಂದ ಸಂಪಾದಿಸುವೆನು, ರಾಜ್ಯಭಾರವು ಸಾಮಾನ್ಯವೆಂದೆಣಿಸಬೇಡ, ಬುದ್ಧಿವಂತನಾದ ಮಂತ್ರಿಯ ಮುಖದಿಂದ ಎಲ್ಲಾ ಆಲೋಚನೆಗಳನ್ನು ಕೇಳುತ್ತಾ, ಸೇನೆಯನ್ನೂ ಭಂಡಾರವನ್ನೂ ದಿನದಿನಕ್ಕೂ ವೃದ್ಧಿ ಮಾಡುತ್ತಾ, ಪ್ರಜೆಗಳ ಸಂತೋಷ ಪಡಿಸುವದೇ ರಾಯನಿಗೆ ಲಾಭವು, ದುಃಖಪಡಿಸುವದೇ ಕಷ್ಟವು, ಎಂಬ ರಾಜ ನೀತಿಯನ್ನೆಲ್ಲಾ ವಿವರಿಸಿ, ತರುವಾಯ ಮಗನಿಗೆ ಪಟ್ಟಾಭಿಷೇಕ ಮಾಡಿ, ತಾನು ನಿಶ್ಚಿಂತೆಯಾಗಿ ಸೌಖ್ಯ ಹೊಂದಿದನು. ಇದೇ ರಾಜ ಪದ್ಧತಿಯು.

---

## 74. THE PRIDE OF LEARNING.

### ೭೪. ವಿದ್ಯಾಗರ್ವ.

ಒಂದು ಅಗ್ರಹಾರದಿಂದ ನಾಲ್ಕು ಮಂದಿ ಬ್ರಹ್ಮಚಾರಿಗಳು ವಿದ್ಯಾರ್ಥಿಗಳಾಗಿ ದೇಶಾಂತರಕ್ಕೆ ಹೋಗಿ ಅಲ್ಲಿ ಮಂತ್ರ ಶಾಸ್ತ್ರ ಮೊದಲಾದ ವಿದ್ಯೆಗಳನ್ನೆಲ್ಲಾ ಕಲಿಯಲಾರಂಭಿಸಿದರು. ಆಗ ಅವರಲ್ಲಿ ಮೂರು ಮಂದಿ ಮಹಾ ಮಂತ್ರವಾದಿಗಳಾದರು, ನಾಲ್ಕನೇಯವನು ಮನಸ್ಸು ಕಲಗಿಸಿ ಹುಚ್ಚು ಹಿಡಿಸುವ ಮಂತ್ರಗಳಿಂದ ಏನೂ ಪ್ರಯೋಜನವಿಲ್ಲವೆಂದು ಲೋಕದ ನಡತೆಗಳೇ ಮುಖ್ಯವಾಗಿ ತಿಳಿಯತಕ್ಕದ್ದಾಗಿದೆ ಎಂಬ ಬುದ್ಧಿವಂತಿಕೆಯಿಂದ

ಸಕಲ ಕಾರ್ಯಗಳನ್ನು ತನ್ನಲ್ಲಿ ತಾನೇ ಆಲೋಚಿಸಿ, ಭದ್ರ ಪಡಿಸುತ್ತಾ, ಹೊರಗೆ ನೋಡಿದವರಿಗೆ ತನಗೇನೂ ತಿಳಿಯದೆಂಬ ಹಾಗೆ, ಬೂದಿ ಮುಚ್ಚಿದ ಕೆಂಡದೋಪಾದಿಯಲ್ಲಿ ಇದ್ದನು. ಅವನ ಮನಸ್ಸನ್ನು ಮೂರನೇಯವನು ತಿಳಿದವನಾಗಿದ್ದನು, ಕಡಿಮೆ ಇಬ್ಬರೂ ವಿದ್ಯಾ ಮದದಿಂದ ಈ ನಾಲ್ಕನೇಯವನನ್ನು ಅಲ್ಲ ಗಳೆಯುತ್ತಾ ಇರುವರು. ಹೀಗೆ ಈ ನಾಲ್ವರೂ ತಮ್ಮ ದೇಶಕ್ಕೆ ಪುನಃ ಬರುತ್ತಿರುವಾಗ ಮಾರ್ಗದಲ್ಲಿ ಸತ್ತು ಬಿದ್ದಿರುವ ಹುಲಿಯನ್ನು ಕಂಡರು. ತಮ್ಮ ಮಂತ್ರ ಬಲದಿಂದ ಆ ಹುಲಿಯನ್ನು ಬದುಕಿಸಿ ನೋಡ ಬೇಕೆಂತ ಅವರಲ್ಲಿ ಇಬ್ಬರು ಹೇಳಿದರು. ಅದ ಕೇಳಿ ನಾಲ್ಕನೇಯವನು ಮೂರನೇಯವನಿಗೆ ಕೇಳಿಸುವ ಹಾಗೆ, ಎಲಾ ಅಣ್ಣಂದಿರಾ, ಲೋಕದಲ್ಲಿ ದುಷ್ಟ ಮೃಗಗಳನ್ನು ಪ್ರಯತ್ನ ಪೂರ್ವಕವಾಗಿ ಹುಡಿಕಿ ಕೊಲ್ಲ ಬೇಕಲ್ಲದೆ, ಸತ್ತ ಹುಲಿಯನ್ನು ಎಬ್ಬಿಸ ಬಾರದು, ಅದು ಬದುಕಿ ಎದ್ದ ಮೇಲೆ ನಮ್ಮನ್ನು ಬದುಕ ಗೊಡಿಸುವದೋ? ಕೊಂದು ಹಾಕುವದು, ಅಂದನು. ಆ ಮಾತಿಗೆ ಮೂರನೇಯವನು ಈ ತಮ್ಮನ ಮಾತು ನಿಜವೇ, ಆ ಕೆಲಸವನ್ನು ಬಿಟ್ಟು ಬಿಡಿ, ಎಂದು ತಡದನು. ಅವನ್ನು ಧಿಕ್ಕರಿಸಿ ವಿದ್ಯಾಗರ್ವಿಗಳಾದ ಇಬ್ಬರೊಂದಾಗಿ, ಮೃತ ಸಂಜೀವಿನಿ ವಿದ್ಯೆಯಿಂದ ಸತ್ತ ಹುಲಿಯನ್ನು ಎಬ್ಬಿಸಲಾರಂಭಿಸಿದರು. ಮಿಕ್ಕವರಿಬ್ಬರೂ ಒಂದು ದೊಡ್ಡ ಮರವನ್ನೇರಿ ಕೊಂಡು ತಮಾಷೆ ನೋಡುತ್ತಾ ಇದ್ದರು. ಆಗ ಆ ವಿವೇಕಿಗಳ ಮಂತ್ರ ಪ್ರಭಾವದಿಂದ ಬದುಕಿದ ಹುಲಿಗೆ ಅದನ್ನು ಬದುಕಿಸಿದವರೇ ಆಹಾರವಾದರು. ಹೀಗೆ ವಿದ್ಯಾಗರ್ವಿಗಳಿಗೆ ವಿವೇಕ ಶೂನ್ಯವಾಗಿರುವದು. ವಿದ್ಯೆಯೂ ವಿವೇಕವೂ ಉಂಟಾದವನೇ ವಿದ್ವಾಂಸನು.

---

## 75. THE TAILOR'S THEFT.

## ೭೫. ಚಿಪ್ಪಿಗನ ಕಳ್ಳತನ.

ದಾರಿಹೋಕನಾದ ಕೋರಿ ಶೆಟ್ಟಿ ಎಂಬ ಒಬ್ಬ ಬಣಜಿಗನು ಘಟ್ಟದ ವ್ಯಾಪಾರಸ್ಥನಾಗಿದ್ದನು. ಅವನು ತಾನು ಘಟ್ಟದ ಕೆಳಗಿನಿಂದ ತಂದ ಅಡಿಕೆ, ಮೆಣಸು, ಯಾಲಕ್ಕಿ, ಲವಂಗ, ಜಾಪತ್ರಿ, ಜಾಕಾಯಿ ಮುಂತಾದ ದಿನಸುಗಳನ್ನೆಲ್ಲಾ ಘಟ್ಟದ ಮೇಲಣ ಶೀಮೆಯಾದ ಬೆಂಗಳೂರು ಮುಂತಾದ ದೊಡ್ಡ ದೊಡ್ಡ ಪೇಟೆ ಮನೆಗಳಲ್ಲಿ ವ್ಯಾಪಾರ ಮಾಡಿ, ಬಂಡವಾಳದ ಹಣವನ್ನು ಮುಂಚಿತವಾಗಿ ಲೆಖ್ಖ ನೋಡಿ, ಒಟ್ಟು ಗಂಟು ಮಾಡಿ, ದೊಡ್ಡ ಸಾವಕಾರನ ವಶಕ್ಕೆ ಕೊಟ್ಟು, ಅವನ ಹೆಸರಿನ ಹುಂಡೀ ಚೀಟನ್ನು ತನಗೆ ಯಜಮಾನನಾದ ಬಳ್ಳಾರಿ ಶಿದ್ದಲಿಂಗ ಶೆಟ್ಟಿಗೆ ಕಳುಹಿಸಿ ಕೊಟ್ಟು, ಲಾಭಾದಾಯದ ಹಣಕ್ಕೆ ಶ್ರೇಷ್ಠವಾದ ಒಂದು ರತ್ನವನ್ನು ಕೊಂಡು ಕೊಂಡು, ಆ ಅಮೂಲ್ಯ ರತ್ನವನ್ನು ಒಬ್ಬರ ಕೈಗೂ ಕೊಡುವದಕ್ಕೆ ನಂಬಿಕೆ ಇಲ್ಲದೆ, ತಲೆಗೆ ಸುತ್ತಿ ಕೊಂಡಿದ್ದ ರುಮಾಲೆಯ ಶರಗಿನಲ್ಲೇ ಕಟ್ಟಿಕೊಂಡು, ಆಗಾಗ್ಯೆ ಕೈಯಿಂದ ಮುಟ್ಟಿ ಮುಟ್ಟಿ ನೋಡಿ ಕೊಳ್ಳುತ್ತಾ, ಬಹು ಜಾಗ್ರತೆಯಾಗಿ ಊರಿಗೆ ಪ್ರಯಾಣ ಸನ್ನಾಹಾ ಮಾಡಿ, ಸಾವಿರಾರು ಕೇಪು ಎತ್ತುಗಳನ್ನೆಲ್ಲಾ ಬಳ್ಳಾರೀ ಮಾರ್ಗದಲ್ಲಿ ಮುಂಚಿತವಾಗಿ ಕಳುಹಿಸಿ, ತಾನು ಮೈಸೂರು ನಗರುಗಳ ಮಾರ್ಗವಾಗಿ ಸ್ಥಳ ಸೇರ ಬೇಕೆಂಬ ಅಪೇಕ್ಷೆಯಿಂದ ತಾನು ಹತ್ತಿ ಕೊಳ್ಳುವ ಎತ್ತು ಒಂದು ಆಳೊಬ್ಬನು ಇಷ್ಟರೊಡನೆ ಹೊರಟು ಬೆಂಗಳೂರಿಂದ ಮೈಸೂರು ತಟ ಹಾದು ಪಯಣದ ಮೇಲೆ ಪಯಣವಾಗಿ ಬಿಸ

ಲೀ ಘಾಟಿಗೆ ಹೋಗಿ ಸೇರಿ, ಆ ರಾತ್ರಿ ಆ ಘಾಟೀ ನಡುವೆ ಇರುವ ಛತ್ರದಲ್ಲಿ ಇಳುಕೊಂಡನು. ಆ ರಾತ್ರಿ ನೂರಾರು ಮಂದಿ ಮಾರ್ಗಸ್ಥರು ಅಲ್ಲೇ ಬಂದು ಇಳುಕೊಂಡಿದ್ದರು. ಹೀಗಿರುವಲ್ಲಿ ಕಳ್ಳತನಕ್ಕಾಗಿಯೇ ಮಾರ್ಗಸ್ಥರೊಳಗೆ ಮಾರ್ಗಸ್ಥನಾಗಿ ಬಂದ ಒಬ್ಬ ಕಳ್ಳನು ಈ ಕೋರಿ ಶೆಟ್ಟಿಯು ಬಂದೇ ಎತ್ತನ್ನೂ ಒಬ್ಬನೇ ಆಳನ್ನೂ ನೋಡಿ, ಇವನು ಘಟ್ಟದ ವ್ಯಾಪಾರಸ್ಥನೆಂದು ತಿಳಿದು, ಅವನು ತಲೆಯ ಮೇಲಿನ ರುಮಾಲು ಸೆರಗನ್ನು ಆಗಾಗ್ಯೆ ಮುಟ್ಟಿ ನೋಡಿ ಕೊಳ್ಳುವದನ್ನು ಕಂಡು ಈ ಸೆರಗಿನಲ್ಲಿ ಏನೋ ಒಂದು ಉತ್ತಮವಾದ ವಸ್ತು ಇದೆ ಎಂತ ನಿಶ್ಚಯಿಸಿ ಹೊಂಚುತ್ತಾ ಇದ್ದು, ಅರ್ಧ ರಾತ್ರಿಯಲ್ಲಿ ಮೈ ಮರತು ನಿದ್ದೆ ಹೋಗುವ ಕೋರಿಶೆಟ್ಟಿಯ ಹತ್ರಕ್ಕೆ ಬಂದು ತನ್ನ ಹುನ್ನರದಿಂದ ರುಮಾಲೆಯ ಸೆರಗಿನ ಗಂಟನ್ನು ಬಿಚ್ಚಿ ಅದರಲ್ಲಿದ್ದ ರತ್ನವನ್ನು ಕದ್ದುಕೊಂಡು ಹೋದನು.

ಇದು ರಾತ್ರೀ ಹಗಲೂ ರತ್ನ ಚಿಂತಾಪರನಾದ ಕೋರಿ ಶೆಟ್ಟಿಗೆ ಕನಸಿನ ಹಾಂಗಿದ್ದು ಅವನು ಸ್ವಪ್ನದ ಕಲವರಿಕೆಯಿಂದ ಬೆಬ್ಬರ ಬಿದ್ದೆದ್ದು, ರುಮಾಲೆಯ ಕೊನೆಯನ್ನು ನೋಡಿಕೊಂಡನು. ಆ ಗಂಟು ಮಗುವಿಲ್ಲದೆ ಬರೀ ತೊಟ್ಲನೋಪಾದಿಯಲ್ಲಿ ಬಿಚ್ಚಿ ಬರಿದಾದ್ದನ್ನು ಕಂಡು, ತನ್ನ ಸ್ವಪ್ನವು ಸ್ವಪ್ನವಲ್ಲ, ಯಥಾರ್ಥವಾಯಿತೆಂದು ದುಃಖಿಸಿ, ಸಂಗಡಲೇ ಧೈರ್ಯ ತಂದುಕೊಂಡು, ಎದ್ದು ಆ ಛತ್ರದಲ್ಲಿ ಮಲಗಿರುವ ನಿದ್ರಾಪರರಾದ ಗಂಡಸರ ಎದೆಗಳನ್ನೆಲ್ಲಾ ಮುಟ್ಟಿ ಮುಟ್ಟಿ ನೋಡಿ, ಆಗ ತಾನೇ ಕದ್ದು ಸುಳ್ಳು ನಿದ್ದೆ ಹೋಗುವ ಕಳ್ಳನ ಎದೆಯು ತಟ ತಟನೆ ಬಡುಕೊಳ್ಳುವದನ್ನು ತಿಳಿದು ಇವನೇ ರತ್ನ ಚೋರನೆಂದು

ನಿಶ್ಚೈಸಿ, ಗುರುತಿಗಾಗಿ ಅವನ ಜುಟ್ಟನ್ನು ಕತ್ತರಿಸಿ ಗುಲ್ಲು ಮಾಡದೆ ಮೆಲ್ಲಗೆ ತಾನಿದ್ದ ತಾವಿಗೆ ಬಂದು ಕೂತಿದ್ದನು. ಕೂಡಲೇ ಆ ಗಂಟುಕಳ್ಳನು ಸತ್ರದಲ್ಲಿ ಮಲಗಿದ್ದವರ ಜುಟ್ಟುಗಳನ್ನೆಲ್ಲಾ ಒಂದೇ ಸರಿಯಾಗಿ ಕತ್ತರಿಸಿ ಬಿಟ್ಟನು. ಕೋರಿಶೆಟ್ಟಿ ಅರುಣೋದಯವನ್ನು ಎದುರುನೋಡುತ್ತಾ ಇದ್ದು ಬೆಳಗಾದ ಕೂಡ್ಲೇ ಛತ್ರದ ಅಧಿಕಾರಿಗೆ ತಿಳಿಸಿದನು. ಆಗ ಆ ಛತ್ರಾಧಿಕಾರಿಯು ಒಳಗಿದ್ದ ಜನಗಳನ್ನೆಲ್ಲಾ ಶೋಧಿಸಲಾಗಿ ಎಲ್ಲರ ಜುಟ್ಟೂ ಒಂದಾಗಿ ಯಿದ್ದ ಕಾರಣ ಆ ಜನರ ಗುಂಪಿನಲ್ಲಿ ಗಂಟು ಕಳ್ಳ ನಿವನೆಂದು ಹಿಡಿಯಲಿಕ್ಕಾಗದೆ ಛತ್ರದಲ್ಲಿ ಇಳಿದಿದ್ದ ಮಾರ್ಗಸ್ಥರನ್ನೆಲ್ಲಾ ಕಾವಲು ಹಾಕಿ ನ್ಯಾಯಾಧಿಪತಿಯ ಬಳಿಗೆ ಕರಕೊಂಡು ಹೋಗಿಬಿಟ್ಟು, ಆ ಸಂಗತಿಯನ್ನೆಲ್ಲಾ ತಿಳಿಸಿದನು. ಬುದ್ಧಿವಂತನಾದ ಆ ಅಧಿಪತಿಯು ಒಂದೇ ಸಮವಾಗಿ ಕತ್ತರಿಸಿರುವ ಜುಟ್ಟುಗಳ ರೀತಿಯನ್ನು ಮನಸ್ಸಿನಲ್ಲಿ ಆಲೋಚಿಸಿ, ಇದು ಕತ್ತರಿಸುವ ವಿದ್ಯೆಯಿಂದ ಉಪಜೀವಿಸುವ ಚಿಪ್ಪಿಗನ ಕೆಲಸವೆಂದು ತಿಳುಕೊಂಡು, ಆ ಬಂದಿರುವ ಜನಗಳ ಜಾತಿಯ ಹೆಸರನ್ನು ಕೇಳಲಾಗಿ ಈ ಗಂಟುಕಳ್ಳನು ತಾನು ಚಿಪ್ಪಿಗನೆಂದು ಹೇಳಿದನು. ಆ ಮೇಲೆ ಅವನ ಬಟ್ಟೆಗಳನ್ನೆಲ್ಲಾ ಶೋಧಿಸಿ ನೋಡಲಾಗಿ, ಅವನ ಜೇಬಿನಲ್ಲಿ ಒಂದು ಕತ್ತರಿ ಪಾಗಿನಲ್ಲಿ ಶಿಕ್ಕಿಸಿರುವ ಸೂಜಿ ಧಾರದ ಉಂಡೆಗಳು ಹೊರ್ತು ಇನ್ನೇನೂ ಶಿಕ್ಕಲಿಲ್ಲ.

ಆಗ ನ್ಯಾಯಾಧಿಪತಿಯು ತನ್ನ ಯುಕ್ತಿ ವಿಚಾರಣೆ ಇವನ ಮೇಲೆ ಸಾಗಲಿಲ್ಲ, ಆದರೂ ಕಳ್ಳತನದ ಗುಮಾನಿ ಪೂರ್ಣವಾಗಿ ಇವನ ಮೇಲೆ ತನಗೆ ಉಂಟಾಗಿದೆ, ಇದನ್ನು ಪರಿಕ್ಷಿಸಿ ನೋಡಬೇಕೆಂದು ಅವನನ್ನು ಪಾರೆದಲ್ಲಿಟ್ಟು ಅವನಿಗೆ ವಾಂತಿಗೆ ಕೊಡಿ

ಸಲು, ಆ ರತ್ನ ವಾಂತಿಯಲ್ಲಿ ಬಿತ್ತು. ನ್ಯಾಯಾಧಿಪತಿಯು ಆ ರತ್ನವನ್ನು ಕೋರಿಶೆಟ್ಟಿಗೆ ಕೊಡಿಸಿ ಕಳ್ಳನಿಗೆ ತಕ್ಕ ಶಿಕ್ಷೆ ಮಾಡಿಸಿದನು. ಹೀಗೆ ಕಳ್ಳತನ ಮಾಡುವವರಿಗೆ ಕೇಡು ತಪ್ಪುವದಿಲ್ಲ

---

## 76. THE LEARNED MAN AMONG FOOLS.

### ೭೬. ಅವಿವೇಕರಲ್ಲಿ ವಿವೇಕವು.

ತುಂಗಭದ್ರಾತೀರವಾಸಿಯಾದ ಒಬ್ಬ ವಿದ್ವಾಂಸನು ಕರ್ನಾಟಕ ದೇಶಾಧಿಪತಿಯಾದ ಕಂಠೀರವ ನರಸರಾಜ ಒಡೆಯರ ಬಳಿಗೆ ಬಂದು, ಬಹುಮಾನವನ್ನು ಹೊಂದ ಬೇಕೆಂಬ ಅಪೇಕ್ಷೆಯಿಂದ ಆ ಸಂಸ್ಥಾನದಲ್ಲಿರುವ ಮುಖ್ಯ ಮುಖ್ಯಸ್ಥರಾದ ವಿದ್ವಾಂಸರನ್ನೆಲ್ಲಾ ವಿನಯ ಪೂರ್ವಕವಾಗಿ ಕಂಡು, ತನ್ನ ವಿದ್ವತ್ತನ್ನು ಎಲ್ಲರಲ್ಲಿಯೂ ವಿಧೇಯನಾಗಿ ತಿಳಿಸಿ, ಅವರ ಪ್ರೀತಿ ಸಂಪಾದಿಸಿ ಅವರ ಮುಖಾಂತರವಾಗಿ ರಾಜ ಸಭಾ ಪ್ರವೇಶವನ್ನು ಮಾಡಿ, ರಾಜ ಮರ್ಯಾದೆಯನ್ನು ಅರಿತು ಕಾಣಿಸಿ ಕೊಂಡು ಫಲ ಮಂತ್ರಾಕ್ಷತೆಗಳನ್ನು ಆಶೀರ್ವಾದ ಪುರಸ್ಸರವಾಗಿ ಕೊಟ್ಟು ಕೊಂಡಾಡಿ, ಅರಸನ ಅನುಮತಿಯಿಂದ ವಿದ್ವಾಂಸ ಮಂಡಲಿಯಲ್ಲಿ ತಕ್ಕ ಸ್ಥಳವರಿತು ಕುಳಿತು ಕೊಂಡು, ತನ್ನ ವರ್ತಮಾನವನ್ನೆಲ್ಲಾ ಪ್ರಸಂಗ ರೂಪದಿಂದ ಅರಿಕೆ ಮಾಡಿ, ವಿದ್ವಾಂಸರ ಗಣನೆಯಲ್ಲಿ ಸೇರತಕ್ಕವನೆಂದು ಬಹುಮತಿ ಪಡೆದು, ಪ್ರಥಮ ಭೇಟಿಯಲ್ಲೇ ಅಮೂಲ್ಯವಾದ ಒಂದು ಮಾಣಿಕ್ಯವನ್ನು ಅರಸನಿಂದ ಸಂಭಾವನೆಯಾಗಿ ಹೊಂದಿ, ಆ ದಿವಸವೇ ಅರಸನ ಅಪ್ಪಣೆ ತೆಗದು

ಕೊಂಡು ತನ್ನ ಸ್ಥಳಕ್ಕೆ ಹೊರಟು ಹೋಗುತ್ತಾ, ಮಾರ್ಗದಲ್ಲಿ ದಾರಿಗಳ್ಳನಾದ ಒಬ್ಬ ಬೇಡನನ್ನೂ ಅವನ ಹೆಂಡತಿಯನ್ನೂ ಸಹ ಕಂಡು, ಅವರು ಕಳ್ಳರೆಂದರಿಯದೆ, ಮಾರ್ಗಸ್ಥರೆಂದು ನಂಬಿ, ಅವರಾಡುವ ಮೋಸದ ಮರ್ಯಾದೆ ಮಾತುಗಳಿಗೆ ಬೆರಗಾಗಿ, ತನ್ನ ವರ್ತಮಾನವನ್ನೆಲ್ಲಾ ಮರೆಮಾಚದೆ ಹೇಳಿದನು. ಆಗ ಅವನ ಬಳಿಯಲ್ಲಿರುವ ಮಾಣಿಕ್ಯವನ್ನು ಅಪಹರಿಸಿ ಕೊಳ್ಳಬೇಕೆಂಬ ಬುದ್ಧಿ ಅವರಿಗೆ ಹುಟ್ಟಿ, ಬೇಡನು ಕ್ರೂರ ಮನಸ್ಸಿನಿಂದ ವಿದ್ವಾಂಸನನ್ನು ನೋಡಿ, ಹಾರುವನೇ, ನಿನ್ನಲ್ಲಿರುವ ಮಾಣಿಕ್ಯವನ್ನು ಒಳ್ಳೇ ಮಾತಿನಿಂದ ಕೊಡುತ್ತೀಯೋ, ಪ್ರಾಣ ಕಳ ಕೊಳ್ಳುತ್ತೀಯೋ? ಎಂದು ಗದ್ದಸಿದನು. ಬ್ರಾಹ್ಮಣನು ದುಷ್ಟ ಸಹವಾಸದಿಂದ ನಷ್ಟಕಾಲ ಬಂತೆಂದು ವ್ಯಸನ ಪಟ್ಟು, ಉಪಾಯದಿಂದ ತನ್ನಲ್ಲಿದ್ದ ಮಾಣಿಕ್ಯವನ್ನು ನುಂಗಿ, ಭಯದಿಂದ ನಡುಗುತ್ತಾ ಬೇಡನನ್ನು ನೋಡಿ, ಅಯ್ಯಾ, ನೀನು ನಾಯಕ ಕುಲದಲ್ಲಿ ಹುಟ್ಟಿ ನಾಯಕ ರತ್ನವೆಂದು ಹೆಸರು ಪಡದು, ನನ್ನನ್ನು ಹಿಂಸಿಸಿ, ಅನಾಯಕನೆಂದೂ ದುರ್ನಾಯಕನೆಂದೂ ಅಪಕೀರ್ತಿ ಹೊಂದ ಬೇಡ, ನನ್ನ ಕೈಯಲ್ಲಿ ಮಾಣಿಕ್ಯವಿಲ್ಲ, ನನ್ನ ಪ್ರಾಣ ರತ್ನವನ್ನು ಅಪಹರಿಸದೆ ಕಾಪಾಡಿ ಮಾತಿನವಾಶಿಯನ್ನೂ ಧರ್ಮವನ್ನೂ ಸಂಪಾದಿಸುವದು ನಿನಗೆ ಬಹು ಒಳ್ಳೇದು, ಎಂದು ಅನೇಕ ಪ್ರಕಾರವಾಗಿ ಬೇಡಿ ಕೊಂಡನು. ಬೇಡನು ಎಲೈ ಕವೀಶ್ವರನೇ, ಕೈಯಲ್ಲಿದ್ದ ರತ್ನವನ್ನು ನುಂಗಿ ಬಿಟ್ಟು, ನನ್ನಲ್ಲಿಲ್ಲವೆಂದು ಬೇಡಿ ಕೊಳ್ಳುತ್ತೀಯೋ? ಬೇಡ ನಾವು ಬೇಡರೆಂಬುವದು ನಿನಗೆ ತಿಳಿಯಲಿಲ್ಲವೋ? ಬೇಡಿದ್ದನ್ನು ಕೊಡದೆ ಹೋದರೆ ನಿನ್ನನ್ನು ಬಿಟ್ಟು ಬಿಡುವೆವೋ? ಇಂಥಾ ಕು

ಯುಕ್ತಿಗಳು ನನ್ನಲ್ಲಿ ತೋರಿಸ ಬೇಡ, ನುಂಗಿದ ರತ್ನವನ್ನು ಕಾರು, ಕಾರದಿದ್ದರೆ ನಾನೇ ಕಾರಿಸುವೆನು, ನೀನು ನುಂಗಿದ್ದನ್ನು ನೀನು ಕಾರಿದರೆ ಪ್ರಾಣದಿಂದ ಊರು ಸೇರುತ್ತಿ, ನಾನು ಕಾರಿಸಿದರೆ ಕಾಡೇ ಸೇರುತ್ತೀ, ನೋಡಿಕೋ, ಎಂದು ಬೆದರಿಸಿದನು. ಹೀಂಗೆ ಒಬ್ಬರಿಗೊಬ್ಬರು ವಾಗ್ವಾದ ಮಾಡುತ್ತಿರುವ ಸಮಯದಲ್ಲಿ "ಕಳ್ಳರಿಗೆಲ್ಲಾ ಕಳ್ಳನು ಕಡುಗಳ್ಳನೆಂಬ ನ್ಯಾಯವಾಗಿ" ಈ ದಾರಿ ಕಳ್ಳ ಬೇಡನನ್ನು ಬೆದರಿಸುವದಕ್ಕೆ ಅಡವಿಗಳ್ಳನಾದ ಒಬ್ಬ ಬೇಡನು ದೊಣ್ಣೆ ತೆಕ್ಕೊಂಡು ಓಡಿ ಬಂದು, ನಿಲ್ಲಿ ನಿಲ್ಲಿ, ಅದೇನು? ಮಾಣಿಕ್ಯವನ್ನು ಕುರಿತು ನೀವಿಬ್ಬರೂ ವ್ಯಾಜ್ಯವಾಡುತ್ತೀರಲ್ಲಾ? ಅದು ಯಾರಲ್ಲಿದ್ದರೂ ಸರಿ, ಅದನ್ನು ನನ್ನೆದುರಿಗೆ ತಂದಿರಿಸಿ? ನಿಮ್ಮ ವ್ಯಾಜ್ಯವನ್ನು ತೀರಿಸುತ್ತೇನೆ, ಇರಿಸದಿದ್ದರೆ ನಿಮ್ಮನ್ನೇ ತೀರಿಸುತ್ತೇನೆ, ಎಂದು ಘರ್ಜಿಸಿದ ಮಾತ್ರದಲ್ಲೇ ಬ್ರಾಹ್ಮಣನು ಬಾಯಿತೊದಲಿ ಭಯದಿಂದ ಮೈಮರೆತು ಬಿದ್ದನು. ಬೇಡನು ಭಯದಿಂದ ನಾಲಿಗೆ ತುಟಿ ಒಣಗಿ ಕೈಕಾಲು ನಡುಗುತ್ತಾ ಮೈಯಲ್ಲಾ ಬೆವರು ಹುಟ್ಟಿ, ಅಯ್ಯೋ! ವ್ಯರ್ಥವಾಗಿ ಬ್ರಾಹ್ಮಣನನ್ನು ಕೊಲ್ಲಿಸುವ ಪಾಪವನ್ನು ಒಡಲಲ್ಲಿ ಕಟ್ಟಿಕೊಂಡು, ಈ ಸರಿಯಾಳಾದ ಬೇಡನ ಕೈಲಿ ಸತ್ತು ಪಿಶಾಚದ ಬಾಯಿಗೆ ಗೊತ್ತಾದ ತುತ್ತಾಗಿ ಹೋಗ ಬೇಕಾಯಿತಲ್ಲಾ, ಎಂದು ತತ್ತರ ಪಟ್ಟು, ಪಶ್ಚಾತ್ತಾಪದಿಂದ ಅಡವಿಗಳ್ಳನನ್ನು ಕುರಿತು ಅಣ್ಣಾ, ನಾವಿಬ್ಬರು ದಾರಿಯಲ್ಲಿ ಹೋಗುತ್ತಾ ಹೋಗುತ್ತಾ ದಾರಿ ಸಾಗುವದಕ್ಕಾಗಿ ಭಾವ ಮೈದಂದಿರ ಸರಸವಾದ ವಿನೋದ ಮಾತುಗಳನ್ನು ವ್ಯಾಜ್ಯವಾಡುವ ಹಾಗೆ ನಗಾಟಕ್ಕೆ ನುಡಿದೆನೇ ಹೊರ್ತು, ಇದು ಹಗೆ ಸಾರವಲ್ಲಾ, ನಗುಸಾರವೆಂದು ತಿಳಿಕೋ, ಅಷ್ಟರ ತಾಳಿಮೆ ನಿನಗೆ ಇಲ್ಲದಿ

ದ್ದರೆ ನನ್ನನ್ನು ಪ್ರಾಣ ಬೆರಿಕೆಯಾಗಿ ಕೇಳಿ ಕೊಂಡು ಮುಂಚಿತವಾಗಿ ಶೋಧಿಸಿಕೋ, ನನ್ನಲ್ಲಿ ಏನೂ ನಿನಗೆ ಸಿಕ್ಕದ ಪಕ್ಷಕ್ಕೆ ನನ್ನ ಹಾಗೆಯೇ ಅವನು ಎಂಬದಾಗಿ ಅವನನ್ನು ಕೊಲ್ಲದೆ ಬಿಟ್ಟು ಬಿಡು, ಇದೇ ನನಗೆ ನಿನ್ನಿಂದ ಆಗ ಬೇಕಾದ ಉಪಕಾರ, ಎಂದು ಧರ್ಮ ಚಿಂತೆಯಿಂದ ಮಾತನಾಡಿದನು. ಅಡವಿ ಕಳ್ಳನು ಎಲಾ ದಾರಿ ಹೋಕರಿರಾ, ನಿಮ್ಮ ಕಳ್ಳ ಮಾತುಗಳು ನಾನು ನಂಬುವದಿಲ್ಲ, ಈ ಹೆಂಗಸಿನ ಮಾತನ್ನು ಕೇಳಿ ತಿಳುಕೊಳ್ಳುವೆನೆಂದು, ಎಲೇ ತಂಗಿಯೇ, ಈ ಸಂಗತಿಯನ್ನು ಮರಮಾಚದೆ ಹೇಳೆಂದು ಕೇಳಿದನು. ಅದಕ್ಕೆ ಬೇಡತಿಯು ತನ್ನ ಗಂಡನನ್ನು ಬದುಕಿಸಿ ಕೊಳ್ಳ ಬೇಕೆಂಬ ಆಶೆಯಿಂದ ಎಲೈ ಅಣ್ಣಾ, ನಿನ್ನ ಸಂಗಡ ಭಯದಿಂದ ನ್ಯಾಯವಾಗಿ ಮಾತನಾಡುವವನು ನನ್ನ ಗಂಡನು, ಮಾತನಾಡುವದಕ್ಕೆ ಸಹ ಚೈತನ್ಯವಿಲ್ಲದೆ ಮೈ ಮರತು ಇರುವವನು ನನಗೆ ಮಾರ್ಗ ಸಹೋದರನು, ಇವರಿಬ್ಬರೂ ವಿನೋದಕ್ಕಾಗಿ ಮಾಣಿಕ್ಯವನ್ನು ಕುರಿತು ವ್ಯಾಜ್ಯ ಮಾಡುವದೇ ಹೊರ್ತು ಒಬ್ಬರಲ್ಲೂ ಮಣಿ ಇಲ್ಲ ನಮ್ಮನ್ನು ನೀನು ಸುಮ್ಮನೆ ದಣಿಸುವದರಲ್ಲಿ ಏನೂ ಗುಣವಿಲ್ಲ, ತೃಣವಷ್ಟು ಪ್ರಯೋಜನವಿಲ್ಲದ ಎಣಿಕೆಯನ್ನು ಎಣಿಸಬೇಡವೆಂದು ಹೇಳಿದಳು. ಆ ಮಾತು ನಿಜವೆಂದು ನಂಬಿ ಅಡವಿ ಗಳ್ಳನು ಸುಮ್ಮನೆ ಹೊರಟು ಹೋದನು. ಈ ದಾರಿ ಹೋಕರು ಮೂರು ಮಂದಿಯೂ ಒಬ್ಬರಿಗೊಬ್ಬರು ಹಗೆ ಮಾಡದೆ ಪ್ರೀತಿಯಾಗಿ ತಮ್ಮ ತಮ್ಮ ಊರುಗಳಿಗೆ ಹೋಗಿ ಸೇರಿಕೊಂಡರು. ಅದಕಾರಣ ಸಜ್ಜನರ ಸಹವಾಸದಿಂದ ದುರ್ಜನರು ಗುಣವಂತರಾಗುವರು.

ಸಂಪೂರ್ಣ.